# ಮೀನಾಳಿಗೆ ಜಾಮೆಟ್ರಿ ಎಂದರೆ ಕಡು ವೈರ-ಆದರೆ ಈಗ ಅದು ಅವಳ ಅಚ್ಚುಮೆಚ್ಚು

ಮೀನಾಳಿಗೆ ಜಾಮೆಟ್ರಿಯಷ್ಟು ಬೇಸರಿಕೆಯನ್ನುಂಟುಮಾಡುವ ಪಾಠ ಬೇರೊಂದಿರಲಿಲ್ಲ.

ಅವಳಿಗೆ ಅದರಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಆ 'ಅಕ್ಯೂಟ್' ಮತ್ತು 'ಅಬ್‌ಟ್ಯೂಸ್' ಆ್ಯಂಗಲ್‌ಗಳು, ಆ ಹೆಕ್ಸಗೋನ್ ಮತ್ತು ಪ್ಯಾರಲೆಲೋಗ್ರಾಮ್‌ಗಳು ಎಂದರೆ ಬರೇ ತಲೆನೋವು— ಅವಳಿಗೆ ಸಾಕುಸಾಕಾಗುತ್ತಿತ್ತು.

ಒಂದು ದಿನ ಒಂದು ವಿಶೇಷ ಸಂಗತಿ ನಡೆಯಿತು! ಅವಳ ಅಣ್ಣ ರಾಜೂ ಅವಳಿಗೆ ಒಂದು ಅಂದವಾದ ಹಳದಿ ಹಾಗೂ ಕಿತ್ತಳೆ ಬಣ್ಣದ, ಬೆಳ್ಳಿಹೊಳಪಿನ ಆಕರ್ಷಕ ಕಂಪಸ್ ಪೆಟ್ಟಿಗೆ ತಂದು ಕೊಟ್ಟನು.

ಮೀನಾ ಆ ಪೆಟ್ಟಿಗೆ ಮತ್ತು ಉಪಕರಣಗಳಿಗೆ ಮಾರು ಹೋದಳು. ಅದೇ ದಿನ ರಾತ್ರಿ ತಾನು ತ್ರಿಕೋಣದ ಶಿಖರವನ್ನೇರಿದ, ವೃತ್ತದೊಳಗೆ ಉರುಳಿದ ಹಾಗೂ ಸ್ಕೇಲ್‌ನಲ್ಲಿ ತೂಗಾಡಿದ ಕನಸು ಕಂಡಳು. ಏನು ಮಜಾ!

ಈಗಂತೂ ಮೀನಾಳಿಗೆ ಜಾಮೆಟ್ರಿ, ಹೆಕ್ಸಗೋನ್ ಮತ್ತು ಪ್ಯಾರಲೆಲೋಗ್ರಾಮ್‌ಗಳೆಂದರೆ ಬಲು ಇಷ್ಟ. ಜಾಮೆಟ್ರಿ ಈಗ ಮೀನಾಳ ಪ್ರೀತಿಪಾತ್ರವಾಗಿದೆ. ಇದು ಆಶ್ಚರ್ಯಕರವಲ್ಲವೆ?







## ಕ್ಯಾಮೆಲ್

ಇನ್‌ಸ್ಟ್ರುಮೆಂಟ್ ಬಾಕ್ಸ್






ಕ್ಯಾಮ್ಲಿನ್ ಪ್ರೈ. ಲಿ.,
ಆರ್ಟ್ ಮಟೀರಿಯಲ್
ಡಿವಿಜನ್,
ಜೆ. ಬಿ. ನಗರ್,
ಬೊಂಬಾಯಿ 400 059.



ಕ್ಯಾಮ್ಲಿನ್‌ನ
ತಯಾರಕರಿಂದಃ ತುಂಡಾಗದ ಪೆನ್ಸಿಲುಗಳು

VISION 794 KAN

**Results of Chandamama—Camlin Colouring Contest No. 14 (Kannada)**

*1st Prize:* Jeevan Rodrigas, Mangalore-2. *2nd Prize:* Sanjay K. Bhat, Kumta 581-343. *3rd Prize:* Prashantha, Athrady. *Consolation Prizes:* K. C. Bhaskar, Chikmangalam; Allamprabhy D. Bakanetti, Barkavi; Satyajit Kockian, Bombay-92; Kumari E. V. Bagare, Harapara Balli; C. V. Satya Prakasha, Tumkur.

# ಫ್ಲಾಶ್ ಬಳಸಿರಿ. ನಗೆ ಬೆಳಗಿಸಿರಿ.

DENTAL CREAM Flash

ನಿಮ್ಮ ನಗೆಗೆ ಈ ಪರಿಯ ಆಹ್ಲಾದಕರ
ಸೊಬಗು ಬರಲು ಕಾರಣಗಳು:

**ಫ್ಲಾಶ್ ಉಲ್ಲಾಸ...**
ಫ್ಲಾಶ್‌ನಲ್ಲಿರುವ ನೀಲಿ ಸತ್ವ
ಬಾಯಿಯ ದುರ್ಗಂಧವನ್ನು
ಹೋಗಲಾಡಿಸುತ್ತದೆ,
ದಂತಕ್ಷಯಕ್ಕೆ ಕಾರಣವಾದ
ಕೀಟಾಣುಗಳನ್ನು ನಿವಾರಿಸುತ್ತದೆ.

**ಫ್ಲಾಶ್ ಆತ್ಮವಿಶ್ವಾಸ...**
ಇದಕ್ಕೆ ಕಾರಣ, ನಿಮ್ಮ ಹಲ್ಲುಗಳನ್ನು,
ಒಸಡುಗಳನ್ನು, ಹೆಚ್ಚೇನು,
ಇಡೀ ಬಾಯಿಯನ್ನೆ ರಕ್ಷಿಸಲು
ಬೇಕಾದದ್ದೆಲ್ಲ ಫ್ಲಾಶ್‌ನಲ್ಲಿದೆ
ಎಂದು ನಿಮಗೆ ಗೊತ್ತಿರುತ್ತದೆ.

**ಫ್ಲಾಶ್ ರುಚಿ...**
ವ್ಹ, ಎಷ್ಟು ಮ-ಮ-ಮಜಾ!
ಬ್ರಶ್ ಮಾಡುತ್ತಲೇ ಇರೋಣ
ಅನಿಸುವಷ್ಟು ಆನಂದ!

ಫ್ಲಾಶ್‌ನ
ಅಪೂರ್ವ ಗುಣ, ಇಡೀ
ಬಾಯಿಗೆ ರಕ್ಷಣೆ!



## ಫ್ಲಾಶ್

ಟೂತ್‌ಪೇಸ್ಟ್ - ಬಾಯಿಯನ್ನು ಶುದ್ಧೀಕರಿಸುವ, ಉಲ್ಲಾಸಭರಿತ ನೀಲಿ ಸತ್ವಯುಕ್ತ

everest/80/FL/294-KN

# ಕಣ್ಣುಗಳನ್ನು ಮುಚ್ಚಿ ನಿಮಗೇನು ಬೇಕೆಂದು ನಿರ್ಧರಿಸಿ.



ಉಳಿತಾಯ ಮಾಡಿದರೆ ಬಯಕೆಗಳು ಈಡೇರುತ್ತವೆ. ಒಂದು ಸೈಕಲ್ಲೇ? ಒಂದು ಗೊಂಬೆಗಳ ಮನೆಯೋ? ಹೊಸ ಆಟದ ಸಾಮಾನೇ? ನಿಮ್ಮ ಹಣದಿಂದಲೇ ಖರೀದಿಸಬಹುದು. ಕೆನರಾ ಬ್ಯಾಂಕಿನ **ಬಾಲಕ್ಷೇಮ** ಠೇವಣಿ ಯೋಜನೆ ನಿಮಗಾಗಿ ಇದೆ. ಬೀಗದ ಕೈಯುಳ್ಳ ಸುಂದರವಾದ **ಬಾಲಕ್ಷೇಮ** ಉಳಿತಾಯ ಪೆಟ್ಟಿಗೆಯಲ್ಲಿ ನಾಣ್ಯಗಳ ಮೇಲೆ ನಾಣ್ಯಗಳನ್ನು ಶೇಖರಿಸಿ. ಪೆಟ್ಟಿಗೆ ತುಂಬಿದೊಡನೆ ಕೆನರಾ ಬ್ಯಾಂಕಿನಲ್ಲಿ ಜಮಾ ಮಾಡಿ ನಾಣ್ಯ ಸಂಗ್ರಹಣೆ ಪುನರಾರಂಭಿಸಿ. ನಾವೂ ಅದಕ್ಕೆ ಸೇರಿಸುವ ಕಾರಣ ನಿಮ್ಮ ಹಣ ಬೆಳೆಯುತ್ತದೆ. ಕೂಡಲೇ, ನಿಮಗೆ ಬೇಕಾದ್ದನ್ನು ಕೊಳ್ಳುವಷ್ಟು ದೊಡ್ಡದಾಗುತ್ತದೆ.

ನಿಮ್ಮ ಬಯಕೆ ಈಡೇರಲು ಎಂತಹ ಚಮತ್ಕಾರ! ಉಳಿತಾಯದ ಪಾಠಕ್ಕೆ ಎಂತಹ ಅದ್ಭುತ ಮಾರ್ಗ!

ಹೆಚ್ಚಿನ ವಿವರಗಳಿಗೆ ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆಗೆ ಭೇಟಿ ನೀಡಿ. **ಕಾಮಧೇನು**, **ವಿದ್ಯಾನಿಧಿ** ಮತ್ತು **ನಿರಂತರ** ನಮ್ಮ ಇತರ ವಿಶೇಷ ಯೋಜನೆಗಳು.




## ಬಾಲಕ್ಷೇಮ ಠೇವಣಿ ಯೋಜನೆ

# ಕೆನರಾ ಬ್ಯಾಂಕ್




(ಒಂದು ರಾಷ್ಟ್ರೀಕೃತ ಬ್ಯಾಂಕ್)

(ರಾಷ್ಟ್ರದಾದ್ಯಂತ)

1,200 ಕ್ಕೂ ಹೆಚ್ಚು ಶಾಖೆಗಳು



# ಚಂದಮಾಮ


ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


---

"ಕೋಪವೆಂಬುದು ಅನರ್ಥ ಸಾಧನ" ಎಂದು ಮಹಾಭಾರತದ ನೀತಿ ಎಂದೋ ಜಗತ್ತಿದೆ ಸಾರಿದೆ. ಕೋಪ ಬಂದ ಕೂಡಲೇ ಒಂದರಿಂದ ಹತ್ತರವರೆಗೆ ಎಣಿಸಬೇಕೆಂದು ಹಿರಿಯರು ಹೇಳುತ್ತಾರೆ. ಹಾಗೆ ತಾಳ್ಮೆ ಬರುವುದೇ ಅಪೂರ್ವ. ದುಡುಕೇ ಕೋಪದ ಗುಣ. ಅಂತಲೇ ಅದರಿಂದ ಕೊಲೆಗಳೂ, ಆತ್ಮಹತ್ಯಗಳೂ ನಡೆದುಬಿಡುತ್ತವೆ. ಇದು ಎಲ್ಲರಿಗೂ ಗೊತ್ತಿದ್ದರೂ ಆಗಾಗ ಜನರ ವಿವೇಕವನ್ನು ಎಚ್ಚರಿಸಬೇಕಾಗುತ್ತದೆ. ಈ ಬಗೆಯ ಎಚ್ಚರಿಕೆಯನ್ನು ಕೊಡುವಂತಿದೆ ಈ ಸಂಚಿಕೆಯಲ್ಲಿರುವ "ಭ್ರಾತೃ ಹಂತಕ" ಎಂಬ ಬೇತಾಳ ಕಥೆ.

## ಅಮರವಾಣಿ

**ಅಸಜ್ಜನೇನ ಸಂಪರ್ಕಾತ್ ಅನಯಂ ಯಾಂತಿ ಸಾಧವಃ**
**ಮಧುರಂ ಶೀತಲಂ ತೋಯಂ ಪಾವಕಂ ಪ್ರಾಪ್ಯ ನಿರ್ಗುಣಮ್**

ಒಳ್ಳೆಯವರಿಗೆ ಕೂಡಾ ದುಷ್ಟ ಸಂಪರ್ಕದಿಂದ ಅನ್ಯಾಯವಾಗುತ್ತದೆ. ತಣ್ಣಗಿನ ಸೀನೀರು ಅಗ್ನಿಯ ಸಂಪರ್ಕದಿಂದ ತನ್ನ ಗುಣಗಳನ್ನು ಕಳೆದುಕೊಳ್ಳುವುದಲ್ಲವೆ?

---


ಸಂಪುಟ: ೬೫ ಆಗಸ್ಟ್ '೮೦ ಸಂಚಿಕೆ: ೨

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦











**ಬಿ. ವಾಸು, ಹೈದ್ರಾಬಾದ್**

ಪ್ರ: ವಿಶ್ವದೊಳಗೆ ಕೃತ್ರಿಮವಾದ ಉಪಗ್ರಹಗಳನ್ನೂ, ರಾಕೆಟ್‌ಗಳನ್ನೂ ಆಗಾಗ ಕಳುಹಿಸುತ್ತಾರಲ್ಲವೆ? ಅವು ಒಂದರೊಡನೆ ಇನ್ನೊಂದು ಢೀ ಹೊಡೆದುಕೊಳ್ಳುವುದಿಲ್ಲವೇಕೆ? ಮತ್ತು ಅವುಗಳಲ್ಲಿ ಮನುಷ್ಯರೂ ಇರುತ್ತಾರೆಯೇ? ಅವುಗಳ ಕೆಲಸ ಮುಗಿದು ಹೋದ ಮೇಲೆ ಅವುಗಳು ಎಲ್ಲಿಗೆ ಹೋಗುತ್ತವೆ?

ಉ: ಕೃತ್ರಿಮ ಉಪಗ್ರಹಗಳು ಸಾಧಾರಣ ಪರಿಸ್ಥಿತಿಯಲ್ಲಿ ಒಂದರೊಡನೆ ಒಂದು ತಗಲುವುದು ಸಾಧ್ಯವಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ, ಕೃತ್ರಿಮ ಉಪಗ್ರಹವು ಭೂಮಿಯ ಸುತ್ತಲೂ ತಿರುಗುವಂತಹುದಾದರೆ, ಅದರ ಕಕ್ಷ್ಯೆ ಪೂರ್ತಿಯಾಗಿ ಅದರ ವೇಗ ಶಕ್ತಿಯ ಮೇಲೆಯೇ ಹೊಂದಿಕೊಂಡಿರುತ್ತದೆ. ಒಂದೇ ವೇಗ ಶಕ್ತಿಯಲ್ಲಿ ಎರಡು ಉಪಗ್ರಹಗಳನ್ನು ಪ್ರಯೋಗಿಸಿದ ಪಕ್ಷದಲ್ಲಿಯೂ, ಅವು ಒಂದೇ ಕಕ್ಷೆಯಲ್ಲಿ ತಿರುಗುತ್ತಿದ್ದರೂ, ಪ್ರಯೋಗ ಕಾಲದಲ್ಲಿ ಇದ್ದ ಅವುಗಳ ದೂರವು ಕಕ್ಷ್ಯೆಯೊಳಗೆ ಕೂಡಾ ಹಾಗೆಯೇ ಇರುತ್ತದೆ. ಆ ದೂರವು ತಗ್ಗುವುದೋ ಹೆಚ್ಚುವುದೋ ಇಲ್ಲ.

ಕೃತ್ರಿಮ ಉಪಗ್ರಹವು ಭೂಮಿಯ ಸುತ್ತೂ ತಿರುಗುವುದನ್ನು ಬಿಟ್ಟು ಇನ್ನೂ ದೂರ ಹೋದ ಪಕ್ಷಕ್ಕೆ, ಅದು ಚಂದ್ರನ ಸುತ್ತಲೂ ತಿರುಗುವ ಅವಕಾಶವಿರುತ್ತದೆ. ಅಂತಹ ಕೃತ್ರಿಮ ಉಪಗ್ರಹಗಳು ಬಹಳ ಕಡಿಮೆಯೇ ಇರುತ್ತವೆ. ಸಾಧಾರಣವಾಗಿ ಉಪಗ್ರಹಗಳು ಚಂದ್ರನ ಸುತ್ತಲೂ ಶಾಶ್ವತವಾಗಿ ತಿರುಗುತ್ತಿರುವಂತೆ ಪ್ರಯೋಗಿಸುವುದಿಲ್ಲ.

ಚಂದ್ರನ ಆಕರ್ಷಣೆಯ ಪರಿಧಿಯನ್ನು ಕೂಡಾ ದಾಟಿ ಹೋದ ರಾಕೆಟ್‌ಗಳು ಒಮ್ಮೆಗೇ ಸೂರ್ಯನ ಸುತ್ತೂ ತಿರುಗುವಂತಹ ಕಕ್ಷ್ಯೆಯನ್ನು ಏರ್ಪಡಿಸಿಕೊಂಡು ಬಿಡುತ್ತವೆ. ಕಾಲಕ್ರಮದಲ್ಲಿ ಅವುಗಳ ಗತಿ ಏನಾಗುವುದೆಂದು ಹೇಳಲು ಯಾರಿಗೂ ಸಾಧ್ಯವಾಗದು.

ಶಾಸ್ತ್ರಜ್ಞರು ಎರಡು ಕೃತ್ರಿಮ ಉಪಗ್ರಹಗಳನ್ನು ಸಂಧಿಸುವಂತಹ ಪ್ರಯೋಗಗಳನ್ನು ಮಾಡಿದ ಸಂಗತಿಯನ್ನು ನಾವು ಪತ್ರಿಕೆಗಳಲ್ಲಿ ಓದುತ್ತೇವೆ. ಹಾಗೆ ಮಾಡಲಿಕ್ಕಾಗಿ ಭೂಮಿಯ ಸುತ್ತಲೂ ಕಕ್ಷ್ಯದೊಳಗೆ ಬಂದ ಕೃತ್ರಿಮ ಉಪಗ್ರಹವನ್ನು ಮತ್ತೆ ರಾಕೆಟ್ ಪ್ರಯೋಗಗಳಿಂದ ಎರಡನೇ ಕೃತ್ರಿಮ ಉಪಗ್ರಹದ ಕಕ್ಷ್ಯದೊಳಗೆ ತರಬೇಕಾಗುತ್ತದೆ. ಈ ಕೆಲಸ ಮಾಡಲು ಕೃತ್ರಿಮ ಉಪಗ್ರಹದೊಳಗೆ ಮನುಷ್ಯರಿರುತ್ತಾರೆ: ಹೀಗೆಯೇ ಚಂದ್ರನ ಮೇಲೆ ಇಳಿದು ಭೂಮಿಗೆ ತಿರುಗಿ ಬಂದ ಅಂತರಿಕ್ಷ ನೌಕೆಗಳಲ್ಲಿ ಕೂಡಾ ಅಗತ್ಯಬಿದ್ದಾಗ ರಾಕೆಟ್ ಪ್ರಯೋಗಗಳನ್ನು ಮಾಡುವ ಮನುಷ್ಯರಿರುತ್ತಾರೆ.

"ಕೆಲಸ ತೀರಿದ" ಕೃತ್ರಿಮ ಉಪಗ್ರಹಗಳು ಮನುಷ್ಯರನ್ನು ಒಳಗೊಂಡಿದ್ದರೆ ಭೂಮಿಗೆ ಹಿಂದಿರುಗಿ ಬರಲೇಬೇಕು. ಅದೇ ವಿಧಿ. ಮನುಷ್ಯರಿಲ್ಲದಿದ್ದರೆ ಸಾಧಾರಣವಾಗಿ ಅವುಗಳನ್ನು ಅಂತರಿಕ್ಷದಲ್ಲೇ ಅವುಗಳ ಪಾಡಿಗೆ ಬಿಡುತ್ತಾರೆ. ಆಗ ಅವು ಕೆಲವು ನೂರು ಮೈಲುಗಳಷ್ಟು ಎತ್ತರದಲ್ಲಿ ಇರುವಂಥವಾದರೆ ಗಾಳಿಯ ನಿರೋಧದಿಂದ ವೇಗ ಶಕ್ತಿಯನ್ನೂ, ಎತ್ತರವನ್ನೂ ಕಳೆದುಕೊಂಡು ಕೆಳಗಿನ ಗಾಳಿಯ ಪೊರೆಗಳಲ್ಲಿಯ ತಿಕ್ಕಾಟಕ್ಕೊಳಗಾಗಿ ಸುಟ್ಟು ಹೋಗುತ್ತವೆ. ಸಾಮಾನ್ಯ ಪ್ರಮಾಣ ಉಳ್ಳಂಥವು ಆಕಾಶದಲ್ಲೇ ಚಿಕ್ಕ ಚಿಕ್ಕ ಉಲ್ಕೆಗಳ ಹಾಗೆ ಬೂದಿಯಾಗಿ ಹೋಗುತ್ತವೆ. ಬಹಳ ದೊಡ್ಡವಾಗಿದ್ದರೆ ಅವುಗಳ ಭಾಗಗಳು ಸ್ಕೈಲಾಬ್‌ನ ಹಾಗೆ ಭೂಮಿಯ ಮೇಲೆ ಬಂದು ಬೀಳಬಹುದು. ಉಲ್ಕೆಗಳ ಹೊಡೆತಕ್ಕೂ ವೇಗ ಶಕ್ತಿ ಹೋಗುತ್ತದೆ.




೮೫

### ಭಯಾವಹವಾದ ಪರಧರ್ಮ

ಪವಿತ್ರವೂ ಪುಣ್ಯಸ್ಥಳವೂ ಆದ ವಾರಾಣಸಿ ನಗರದಲ್ಲಿ ಕರ್ಪೂರಪಟಕನೆಂಬ ಒಬ್ಬ ಅಗಸನಿದ್ದನು. ಅವನು ಒಂದು ದಿನ ರಾತ್ರಿ ತುಂಬಾ ಬಳಲಿ ಹೋದುದರಿಂದ ಮಲಗಿದ ಕೂಡಲೇ ಗಾಢನಿದ್ರೆ ಬಂದು ಬಿಟ್ಟಿತು. ಹೊರಗೆ ಅವನ ಆವರಣದಲ್ಲಿ ಅವನ ಕತ್ತೆಯೂ ನಾಯಿಯೂ ಕಟ್ಟಲ್ಪಟ್ಟಿದ್ದುವು.

ಸುಮಾರು ನಡುರಾತ್ರಿಯ ಮೇಲೆ ಒಬ್ಬ ಕಳ್ಳ ಅಗಸನ ಆವರಣದೊಳಗೆ ಪ್ರವೇಶಿಸಿದನು. ಅದನ್ನು ತಿಳಿದೂ ಸುಮ್ಮನಿರುವ ನಾಯಿಯನ್ನು ನೋಡಿ ಕತ್ತೆ, "ಕಳ್ಳ ಬಂದಿದ್ದಾನೆ, ಸುಮ್ಮನಿರುವೆಯಲ್ಲಾ? ಬೊಗಳಿ ಯಜಮಾನನನ್ನು ಎಬ್ಬಿಸು. ಅದು ನಿನ್ನ ಧರ್ಮವಲ್ಲವೆ?" ಎಂದಿತು.

"ನೀನೇನು ನನಗೆ ಬುದ್ಧಿ ಹೇಳುವುದು? ನಿನ್ನ ಪಾಡಿಗೆ ಇರುವುದು ಬಿಟ್ಟು ನನಗೆ ಧರ್ಮ ತಿಳಿಸುವ ಕೆಲಸ ನಿನಗೆ ಬೇಡ. ಒಂದು ಕಾಲದಲ್ಲಿ ನಾನು ತುಂಬಾ ವಿಶ್ವಾಸದಿಂದ ನನ್ನ ಯಜಮಾನನ ಮನೆಯನ್ನೂ ಸೊತ್ತನ್ನೂ ಕಾದುಕೊಂಡಿದ್ದ ಸಂಗತಿ ನಿನಗೆ ಗೊತ್ತಿದೆ. ಅವನು ಇತ್ತೀಚೆಗೆ ತನ್ನ ಸುಖವನ್ನೂ ಕ್ಷೇಮವನ್ನೂ ನೋಡಿಕೊಳ್ಳುತ್ತ, ನನ್ನ ಮಹತ್ವವನ್ನು ಮರೆತು ಹೊತ್ತು ಹೊತ್ತಿಗೆ ನನಗೆ ತಿಂಡಿ ಕೊಡುವುದನ್ನು ಬಿಟ್ಟಿದ್ದಾನೆ. ಏನೋ ಒಂದು ಅಪಾಯ ಬರುವ ವರೆಗೂ ಯಜಮಾನರು ತಮ್ಮ ಸೇವಕರನ್ನು ಅರ್ಥಮಾಡಿಕೊಳ್ಳುವುದಿಲ್ಲ. ಇವತ್ತು ಕಳ್ಳ ಏನೋ ಸ್ವಲ್ಪ ಕದ್ದುಕೊಂಡು ಹೋಗಲಿ. ನಾಳೆಯಿಂದ ಸರಿಯಾಗಿ ತಿಂಡಿಕೊಡಲು ಶುರು ಮಾಡುತ್ತಾನೆ" ಎಂದಿತು ನಾಯಿ.

"ನನ್ನ ಮಾತು ಕೇಳಯ್ಯಾ ಹೆಬಗಾ! ತನ್ನ ಧರ್ಮ ನಿರ್ವಹಿಸಬೇಕಾದ ಕ್ಷಣದಲ್ಲಿ ಸ್ವಾರ್ಥವನ್ನು ಕುರಿತು ಆಲೋಚಿಸುವವನು ಎಂತಹ ನೌಕರ! ಎಂತಹ ಮಿತ್ರ!" ಎಂದಿತು ಕತ್ತೆ.

"ಸೇವಕರ ಹೊಟ್ಟೆ ಕಾಯಿಸಿ, ಅಗತ್ಯ ಬಿದ್ದಾಗ ಮಾತ್ರ ಸವಿಯಾಗಿ ಮಾತಾಡುವವನು ಎಂತಹ ಯಜಮಾನ?" ಎಂದು ನಾಯಿ ಕೇಳಿತು.

ಈ ಮಾತು ಕೇಳಿ ಕತ್ತೆಗೆ ಬಹಳ ಕೋಪ ಬಂತು. "ಮಹಾ ಪಾಪಿಯೇ! ಇಂತಹ ಸಮಯದಲ್ಲಿ

ಯಜಮಾನನ ಕ್ಷೇಮವನ್ನು ಮರೆಯುವ ನೀನು ಎಂತಹ ಹೀನ ಬುದ್ಧಿಯವನು! ಇನ್ನೇನು ಮಾಡಲಿ? ನಾನೇ ನನ್ನ ಶಕ್ತಿವಂಚನೆಯಿಲ್ಲದೆ ಯಜಮಾನನನ್ನು ಎಬ್ಬಿಸುತ್ತೇನೆ. ಬಿಸಿಲು ಬೇಕಾದರೆ ಸೂರ್ಯನಿಗೆ ಬೆನ್ನು ತೋರಿಸಬೇಕು. ಅಗ್ನಿಗೆ ಮುಖ ತೋರಿಸಬೇಕು. ಯಜಮಾನನನ್ನು ಮನಸ್ಫೂರ್ತಿಯಾಗಿ ಸೇವಿಸುವುದೇ ಸೇವಕ ಧರ್ಮ. ನಿರ್ಮಲಚಿತ್ತವಿದ್ದು ಕೆಲಸಮಾಡಿದರೇನೇ ಉತ್ತಮ ಲೋಕಗಳು ಲಭಿಸುತ್ತವೆ" ಎಂದು ಹೇಳಿ ಕತ್ತೆ ಕೆನೆದು ಗಟ್ಟಿಯಾಗಿ ಓಂಡ್ರಿಸಿ ಕೂಗಿತು.

ಕಳ್ಳನು ಓಡಿ ಹೋದನು. ಆದರೆ ಒಳ್ಳೆಯ ನಿದ್ದೆಯನ್ನು ಹಾಳು ಮಾಡಿದುದಕ್ಕೆ ಅಗಸನು ಎದ್ದು ಬಂದು ಕತ್ತೆಯನ್ನು ಹೊಡೆದು ಬಡೆದು ಹಣ್ಣು ಮಾಡಿದನು.

### ಆನೆಯನ್ನು ಕೊಂದ ನರಿ

ಬ್ರಹ್ಮಾರಣ್ಯವೆಂದು ಕರೆಯಲ್ಪಡುವ ಬ್ರಹ್ಮಾಂಡವಾದ ಕಾಡಿನಲ್ಲಿ ಕರ್ಪೂರತಿಲಕವೆಂಬ ದೊಡ್ಡ ಆನೆಯೊಂದಿತ್ತು. ಅದು ಇತರ ಆನೆಗಳಿಗಿಂತ ಬಹು ಬಲಿಷ್ಠವಾಗಿತ್ತು. ಅದನ್ನು ನೋಡಿ ನರಿಗಳವುಂದೆ, "ಈ ದೊಡ್ಡ ಆನೆಯನ್ನು ನಮಗೆ ಕೊಲ್ಲಲು ಸಾಧ್ಯವಾದರೆ ನಾಲ್ಕು ತಿಂಗಳವರೆಗೆ ಆಹಾರಕ್ಕೆ ಕೊರತೆ ಬಾರದು" ಎಂದುಕೊಳ್ಳುತ್ತಿದ್ದುವು.

ಒಂದು ಮುದಿನರಿ ಉಳಿದ ನರಿಗಳನ್ನು ನೋಡಿ, "ನಾನು ನನ್ನ ಬುದ್ಧಿ ಬಲದಿಂದ ಅದು ಸಾಯುವ ಹಾಗೆ ಮಾಡುತ್ತೇನೆ." ಎಂದು ಹೇಳಿ ಆನೆಯ ಬಳಿಗೆ ಹೋಗಿ, ಸಾಷ್ಟಾಂಗ ನಮಸ್ಕಾರ ಮಾಡಿ, "ಮಹಾಪ್ರಭೂ! ನನ್ನದೊಂದು ಕೋರಿಕೆಯನ್ನು ದಯಮಾಡಿ ಆಲಿಸಬೇಕು" ಎಂದಿತು.

"ಯಾರು ನೀನು? ಎಲ್ಲಿಂದ ಬಂದವನು? ಏನು ಕೋರಿಕೆ?" ಎಂದು ಆನೆ ಕೇಳಿತು. ಮುದಿನರಿ ಹೀಗೆಂದಿತು :

"ನಾನು ನರಿಗಳ ಅಜ್ಜ. ನಿನ್ನೆ ಅರಣ್ಯದ ಎಲ್ಲಾ ಮೃಗಗಳೂ ಸಭೆಸೇರಿ ನನ್ನನ್ನು ತಮ್ಮ ದೂತನಾಗಿ ನಿಮ್ಮ ಬಳಿಗೆ ಕಳುಹಿಸಿದ್ದಾವೆ. ಅವು ತವೊಳ್ಮಂದಿಗೆ



ಹೀಗೆ ಹೇಳ ಬೇಕೆಂದಿವೆ: ನಾವು ರಾಜನಿಲ್ಲದೆ ಜೀವಿಸುವುದು ಭಾವ್ಯವಾದುದಲ್ಲ. ಆದುದರಿಂದ ಸಕಲ ರಾಜ ಲಕ್ಷಣಗಳೂ ಇರುವ ಕರ್ಪೂರತಿಲಕ ಗಜ ಮಹಾರಾಜರಾದ ತಮ್ಮನ್ನು ನಮ್ಮ ರಾಜನನ್ನಾಗಿ ಒಪ್ಪಿಕೊಂಡು ಅಭಿಷೇಕಿಸಲು ನಿಶ್ಚಯಿಸಿದ್ದೇವೆ. ದೊಡ್ಡ ವಂಶದಲ್ಲಿ ಹುಟ್ಟಿ ಉದಾರಶೀಲತೆ, ಸದ್ವರ್ತನೆಗಳಿಂದ ಪವಿತ್ರರಾಗಿ ರಾಜ ನೀತಿ ತಿಳಿದವರಾಗಿರುವವರೇ ರಾಜನಾಗಲು ಅರ್ಹರು, ಯಾರೇ ಆಗಲಿ, ಮೊದಲು ರಾಜನ ದರ್ಶನಮಾಡಿ ಆ ಮೇಲೆ ಹೆಂಡತಿಯನ್ನೂ ಸಂಪತ್ತನ್ನೂ ಹುಡುಕಿಕೊಳ್ಳಬೇಕು. ರಾಜನಿಲ್ಲದ ಪಕ್ಷದಲ್ಲಿ ಹೆಂಡತಿಯೂ ಸಂಪದಗಳೂ ಇದ್ದು ಯಾವ ಲಾಭವೂ ಇಲ್ಲ. ಅವುಗಳು ಕ್ಷಣ ಮಾತ್ರದಲ್ಲಿ ಇನ್ನೊಬ್ಬರ ಪಾಲಾಗುತ್ತವೆ. ರಾಜನೇ ಮಳೆಯ ಹಾಗೆ ಪ್ರಾಣದಾತನಾಗಿರುತ್ತಾನೆ. ಒಂದು ವೇಳೆ ನೀರಿಲ್ಲದಿದ್ದರೂ ಪ್ರಾಣವುಳಿಸಿಕೊಳ್ಳಬಹುದೇನೋ, ರಾಜನಿಲ್ಲದಿದ್ದರೆ ಮಾತ್ರ ಸಾಧ್ಯವಿಲ್ಲ. ಸಾಧಾರಣವಾಗಿ ಪ್ರಜೆಗಳು ರಾಜ ಭೀತಿಯಿಂದಲೇ ಸರಿಯಾಗಿ ಪ್ರವರ್ತಿಸುತ್ತಾರೆ. ಸಹಜವಾಗಿಯೇ ಪುಣ್ಯಾತ್ಮರೂ ಸದ್ಧರ್ಮಿಗಳೂ ಆಗಿರುವವರು ಬಹಳ ವಿರಳ. ತಮ್ಮ ಗಂಡಂದಿರು ಮುದುಕರಾದರೂ, ಹೆಳವರಾದರೂ, ರೋಗಿಷ್ಠರಾದರೂ, ನಿರ್ಧನರಾದರೂ ಹೆಂಡಂದಿರು ವಿಶ್ವಾಸದಿಂದ ನೋಡುವರೆಂದರೆ ಅದು ರಾಜದಂಡನೆಯ ಭೀತಿಯಿಂದ ತಾನೇ? ಇವೆಲ್ಲಕ್ಕೂ ಸರಿಹೋಗುವಂತೆ ತಾವು ಆದರ್ಶ ಪ್ರಭುಗಳಾಗಿದ್ದೀರಿ. ಆದುದರಿಂದ ತಮ್ಮ ಪಟ್ಟಾಭಿಷೇಕವನ್ನು ಕಾಣಲು ನಾವೆಲ್ಲಾ ಕಾದುಕೊಂಡಿದ್ದೇವೆ. ತಾವು ನನ್ನೊಂದಿಗೆ ಬೇಗನೇ ಬಂದು, ಸುಮುಹೂರ್ತ ದಾಟುವುದಕ್ಕೆ ಮೊದಲೇ ಮಹಾರಾಜರಾಗಬೇಕು. ದಯಮಾಡಿರಿ."

ರಾಜ ಪಟ್ಟದ ಮೇಲಿನ ದುರಾಶೆಯ ಒತ್ತಡದಿಂದ ಕರ್ಪೂರತಿಲಕವು ನರಿಯ ಹಿಂದೆಯೇ ಹೊರಟಿತು.

ದಾರಿಯಲ್ಲಿ ಒಂದು ಕೆಸರು ಗುಂಡಿಯಿದ್ದಿತು. ಅದು ಮೇಲಿನಿಂದ ಕೆಸರಿನಂತೆ ಕಾಣುತ್ತಿರಲಿಲ್ಲ.



ನರಿ ಆ ಗುಂಡಿಯ ಅಂಚಿನ ಗಟ್ಟಿ ನೆಲದ ಮೇಲೆಯೇ ನಡೆಯಿತು. ಆದರ ಹಿಂದಿನಿಂದ ಬರುವ ಆನೆ ಕೆಸರ ಹೊಂಡದಲ್ಲಿ ಇಳಿದು ಭೂಮಿಯಡಿಗೆ ಹೋಗುತ್ತ, "ಮಿತ್ರಾ! ನರಿರಾಯಾ! ಈಗ ನಾನೇನು ಮಾಡಲಿ? ಈ ಕೆಸರುಗುಂಡಿಯಲ್ಲಿ ಸಿಕ್ಕಿಕೊಂಡು ಘೋರವಾದ ಮರಣಕ್ಕೆ ಬಿದ್ದೆನೋಯ್! ಒಂದು ಸಾರಿ ನನ್ನನ್ನು ತಿರುಗಿ ನೋಡು" ಎಂದಿತು.

ನರಿ ತಿರುಗಿ ನೋಡಿ ಅಣಕಿಸುವಂತೆ ನಗುತ್ತ, "ನನ್ನ ಬಾಲ ಹಿಡಿದುಕೊಂಡು ಮೇಲೆ ಬಾ. ನನ್ನಂಥ ಪ್ರಾಣಿಯನ್ನು ಬುದ್ಧಿಕೆಟ್ಟು ನಂಬಿದುದಕ್ಕೆ ನಿನಗೆ ಈ ಮರಣ ತಪ್ಪದು. ಸಜ್ಜನರೊಂದಿಗೆ ಸ್ನೇಹ ಮಾಡಿದವರು ಚೆನ್ನಾಗಿರುತ್ತಾರೆಂದೂ, ದುಷ್ಟರೊಂದಿಗೆ ಸೇರಿದವರು ಹಾಳಾಗುತ್ತಾರೆಂದೂ ಹಿರಿಯರು ಹೇಳಿಯೇ ಇದ್ದಾರೆ. ಅದನ್ನು ನೆನೆದುಕೊ!" ಎಂದು ಹೇಳಿತು.

ಏನೂ ಮಾಡಲಾಗದೆ ಕೆಸರಿನಲ್ಲಿ ಬೆನ್ನಿನವರೆಗೆ ಹೂತು ಹೋಗಿ ಸಾಯುವ ಆನೆಯ ಮೇಲೆ ನರಿಗಳ ಗುಂಪು ಎಗರಿ ಕಿತ್ತು, ಬಹಳ ದಿನಗಳವರೆಗೆ ತಿಂದು ತೀರಿಸಿದುವು.

### ಕೆಲಸ ಮುಗಿಯುವವರೆಗೆ ಭೃತ್ಯ

ಆರಾವಳೀ ಪರ್ವತದ ಒಂದು ಶಿಖರದಲ್ಲಿ ಮಹಾವಿಕ್ರಮನೆಂಬ ಸಿಂಹವಿದ್ದಿತು. ಅದು ನಿದ್ರಿಸಿಕೊಂಡಿರುವಾಗ ಒಂದು ಇಲಿ ಅದರ ಶರೀರದ ಮೇಲೆ ಹತ್ತಿ ಓಡಾಡುತ್ತ ಜೂಲು ಹಿಡಿದೆಳೆದು ಕಚ್ಚುತ್ತಿತ್ತು. ಸಿಂಹಕ್ಕೆ ಬಹಳ ರೇಗಿಹೋಯಿತು. ಆದರೆ ಆ ಇಲಿ ಬಹಳ ಚಾಲಾಕುತನದಿಂದ ಸಿಂಹಕ್ಕೆ ಸಿಕ್ಕದೆ ತಪ್ಪಿಸಿಕೊಂಡುಬಿಡುತ್ತಿತ್ತು.

ಇಲಿಯ ಕಾಟವನ್ನು ಹೇಗೆ ತಪ್ಪಿಸಿಕೊಳ್ಳುವುದೆಂದು ಸಿಂಹಕ್ಕೆ ತಿಳಿಯಲಿಲ್ಲ. ಇಲಿಗೆ ನಿಜವಾದ ಶತ್ರು ಬೆಕ್ಕು ತಾನೇ? ಅಂತಲೇ ಸಿಂಹ ಒಂದು ಬೆಕ್ಕನ್ನು ಕರೆದು ಸವಿಮಾತಾಡಿ ಅದಕ್ಕೆ ಮಾಂಸದ ತುಣುಕುಗಳನ್ನು ಕೊಡುತ್ತಾ ಬಂದಿತು.

ಬೆಕ್ಕನ್ನು ಸಿಂಹದ ಬಳಿಯಲ್ಲಿ ನೋಡಿದ ಮೇಲೆ ಇಲಿ ತನ್ನ ಬಿಲದಿಂದ ಹೊರ ಬೀಳದೆ ಹಸಿವೆಯಿಂದ ಬಿಲದೊಳಗೇ ಬಾಡಿಹೋಗ ತೊಡಗಿತು. ಹಾಗೆ ಎಷ್ಟು ದಿನ ತಾನೇ ಇರಲು ಸಾಧ್ಯ? ಅದು ಸಾಹಸ ಮಾಡಿ ಒಂದುಸಾರಿ ಹೊರಗೆ ಬಂದದ್ದೇ ತಡ, ಬೆಕ್ಕು ಸ್ವಾಮಿ ಭಕ್ತಿಯಿಂದ ಇಲಿಯನ್ನು ಗಬಕ್ಕನೆ ಹಿಡಿದು ಕೊಂದುಹಾಕಿತು.

ಅಷ್ಟಾದ ಮೇಲೆ ಸಿಂಹಕ್ಕೆ ಬೆಕ್ಕಿನ ಭೃತ್ಯತನ ತೀರಿಹೋಯಿತು. ಅದಕ್ಕೆ ಮಾಂಸದ ತುಣುಕುಗಳನ್ನು ಕೊಡುವುದನ್ನೂ ಮಾತಾಡುವುದನ್ನು ಸಹಾ ಬಿಟ್ಟಿತು. ಮೋರೆ ತಗ್ಗಿಸಿಕೊಂಡು ಹೊರಟುಹೋಗಬೇಕಾಯಿತು ಬೆಕ್ಕು.






೩

[ ಕುಂಡಲಿನೀ ಸೈನ್ಯಗಳಿಂದ ತುಂಬಿದ ಹಡಗುಗಳು ಸಮುದ್ರದಲ್ಲಿ ಚೆಲ್ಲಾ ಚೆದರಾಗಿ ಹೋದುವು. ಸೇನಾನಿಯಾದ ಸಮರಸೇನನು ತುಫಾನು ನಿಂತ ಮೇಲೆ ಉಳಿದ ಹಡಗುಗಳನ್ನು ಒಂದುಗೂಡಿಸಿ ಯಾವುದೋ ಒಂದು ದ್ವೀಪವನ್ನು ತಲಪಿ, ಕೆಲಮಂದಿ ಸೈನಿಕರನ್ನು ಮಾತ್ರ ತನ್ನೊಂದಿಗೆ ಕರೆದುಕೊಂಡು ಆ ದ್ವೀಪದಲ್ಲಿ ಮುಂದೆ ಹೋದನು. ಅಲ್ಲಿಯ ವಿಚಿತ್ರ ಪ್ರಾಣಿಗಳ ಹೋರಾಟವನ್ನೂ ಓಡಿಬರುವ ಆನೆಯನ್ನೂ ನೋಡಿ ಹೆದರಿ ಮರವನ್ನೇರಿದನು.]

ಸಮರಸೇನನನ್ನನುಸರಿಸಿ ಅವನ ಜತೆಗಾರರಾದ ಸೈನಿಕರೂ ದೂರ ಓಡಲು ಧೈರ್ಯ ಸಾಲದೆ, ತಮ್ಮ ಒಡೆಯನು ಏರಿದ ಮರದ ಮೇಲೆಯೇ ಏರಿದರು. ಅವರೆಲ್ಲ ಆ ಹೆಮ್ಮರದ ಕೊಂಬೆಗಳಲ್ಲಿ ಅಡಗಿಕೊಂಡು ಅದ್ಭುತ ಮೃಗಗಳ ಮಹಾ ಸಮರವನ್ನು ನೋಡ ತೊಡಗಿದರು. ಎರಡು ಸಿಂಹಗಳ ಏಟಿಗೆ ಗುರಿಯಾದ ಆನೆ ಅವುಗಳಿಂದ ತಪ್ಪಿಸಿಕೊಳ್ಳಲು ನಾನಾ ಪ್ರಯಾಸ ಪಡುತ್ತಿದ್ದಿತು. ಆಗಾಗ ಏಳುವ ಅವುಗಳ ಘೀಂಕಾರ ಗರ್ಜನೆಗಳಿಂದ ಮರಗಳೆಲ್ಲ ನಡುಗುವಂತೆ ಭಾಸವಾಗುತ್ತಿತ್ತು. ಆನೆ ಓಡಾಡುತ್ತಾ ಬೀಸುವ ಸೊಂಡಿಲಿನ ಆಘಾತದಿಂದ ಮರಗಳು ಮುಗುಚಿ ಬೀಳುತ್ತಿದ್ದುವು. ಹಾಗೆ ತಾವು ಏರಿಕೊಂಡ ಮರವೂ ಬಿದ್ದರೇನು ಗತಿ ?

ಸಮರಸೇನನೊಂದಿಗೆ ಮರದ ಕೊಂಬೆಯಲ್ಲಿ ಹುದುಗಿದ್ದ ಒಬ್ಬ ಸೈನಿಕನು, "ಸೇನಾನೀ ದೊರೆಗಳೇ, ನಾವೀಗ ದೊಡ್ಡ ಇಕ್ಕಟ್ಟಿಗೆ ಸಿಕ್ಕಿಬಿದ್ದೆವು. ಭಯಂಕರವಾದ ಈ ದ್ವೀಪಾರಣ್ಯದಲ್ಲಿ ನಾವು ದೋಚಿಕೊಂಡು ಹೋಗುವಂಥ ಧನರಾಶಿಗಳೇನೂ ಇರದು. ಈ ಪ್ರಾಣಿಗಳಿಂದ ತಪ್ಪಿಸಿಕೊಂಡರೆ ಅದೇ ದೊಡ್ಡ ನಿಧಿ!" ಎಂದನು.

ಆ ಮಾತಿನಿಂದ ಧೈರ್ಯಗೊಂಡ ಇನ್ನೊಬ್ಬ ಸೈನಿಕನು, "ಹೌದು ಹೌದು! ಧನರಾಶಿಗಳಿಗೇನು?




ನಾವು ನಮ್ಮ ಜೀವದೊಂದಿಗೆ ಹೊರಬಿದ್ದರೆ ಅದೇ ಹತ್ತು ಸಾವಿರ! ಬದುಕಿದ್ದರೆ ಎಷ್ಟೋ ನಿಧಿ ಸಿಕ್ಕೀತು!" ಎಂದನು.

ಸಮರಸೇನನು ಅವರಿಗೇನೂ ಉತ್ತರ ಹೇಳದೆ ದೀರ್ಘಾಲೋಚನೆಯಲ್ಲಿ ಮುಳುಗಿಹೋಗಿದ್ದನು. ಲೋಕದ ಪ್ರಜೆಗಳೆಲ್ಲಾ ನಾಗರೀಕರಾಗಿ ಒಳ್ಳೆಯ ಜೀವನವನ್ನು ರೂಪಿಸಿಕೊಂಡಿರುವ ಈ ಕಾಲದಲ್ಲಿ, ಇದೊಂದು ದ್ವೀಪವು ಇಷ್ಟೊಂದು ಭಿನ್ನವಾಗಿದೆಯೆಂದರೆ ಏನಾಶ್ಚರ್ಯ! ಈ ದ್ವೀಪವಾಸೀ ಪ್ರಾಣಿಗಳು ಯಾವುದೋ ಶಿಲಾಯುಗದ ದಶೆಯುವರಾಗಿಯೇ ಇದ್ದಾರೆಂಬುದು ಕಣ್ಣೆದಿರೇ ಕಾಣುತ್ತಿದೆ. ಇಲ್ಲಿ ಒಬ್ಬ ರಾಜನೋ, ಒಂದು ಪರಿಪಾಲನೆಯ ಪದ್ಧತಿಯೋ ಏನೂ ಕಾಣುವುದಿಲ್ಲ. ಹಾಗಿರುವಾಗ ಈ ದ್ವೀಪದಲ್ಲಿ ಧನವಿರಲಿಕ್ಕೂ ಸಾಧ್ಯವಿಲ್ಲ. ಇಂಥಾ ಅದ್ಭುತ ದ್ವೀಪಕ್ಕೆ ನಮ್ಮನ್ನು ತಂದುಹಾಕಿದ್ದು ಧೂಮಕೇತುವೇ ಎಂದು ಆ ರಾಜಪುರೋಹಿತನಿಗೆ ಹೇಳಲು ಒಳ್ಳೇದಾಯಿತು...

ಸಮರಸೇನನ ಆಲೋಚನೆಯನ್ನು ತುಂಡುಮಾಡುವಂತೆ, ಅರಣ್ಯವೆಲ್ಲಾ ಪ್ರತಿಧ್ವನಿಸಿಕೊಂಡು. "ಹೇಯ್ ಕಾಲ ಭುಜಂಗಾ! ಕಂಕಾಳಾ! ಬನ್ನಿ ಬನ್ನಿ! ಆ ಚತುರ್ನೇತ್ರನನ್ನು ಹೇಗಾದರೂ ಹುಡುಕಿ ಹಿಡಿದು ಹತಮಾಡಿ ಬಿಡೀ! ಅವನು ಈ ದ್ವೀಪದಲ್ಲೇ ಇದ್ದಾನೆನ್ನಲು ಸಂದೇಹವಿಲ್ಲ. ಚೆನ್ನಾಗಿ ಹುಡುಕಿ ಹಿಡೀರಿ!" ಎಂದು ಪ್ರಳಯ ಭೀಕರ ಕಂಠ ಧ್ವನಿ ಮೊಳಗಿತು.

ಈ ಶಬ್ದಾಘಾತದಿಂದ ತನ್ನ ಎದೆ ನಿಂತುಹೋಯಿತೇನೋ ಅನಿಸಿತು ಸಮರಸೇನನಿಗೆ. ಸೈನಿಕರಂತೂ ಮರದೊಂದಿಗೆ ಮರವಾಗಿ ಅಂಟಿಹೋದರು. ಅದರ ಮಹತ್ವ ಎಷ್ಟರಮಟ್ಟಿಗೆ ಇತ್ತೆಂದರೆ, ಆ ಶಬ್ದ ಕೇಳಿದ್ದೇ ತಡ, ಆನೆ, ಸಿಂಹ, ಕೊಳದ ಸಮೀಪವಿದ್ದ ಪ್ರಾಣಿಗಳೆಲ್ಲಾ ಚೆಲ್ಲಾ ಚೆದರಾಗಿ ಓಡಿದುವು. ಮರದ ಮೇಲಿದ್ದ ನರವಾನರಗಳೂ ದೂರ ಓಡಿದುವು.

ಆ ಶಬ್ದ ಹೊರಟ ದಿಕ್ಕನ್ನೇ ನೋಡ ನೋಡು ತ್ತಿರಲು ಕೊಳದ ದಂಡೆಯ ಮೇಲೆ ಒಬ್ಬ ದೀರ್ಘ ಕಾಯದವನು ಕಾಣಿಸಿದನು. ಅವನು ಚಿಕ್ಕದೊಂದು ತಾಳೇ ಮರದಷ್ಟು ಎತ್ತರವಿದ್ದನು. ಅವನಿಗೆ ತೀಕ್ಷ್ಣ ದೃಷ್ಟಿಯ ಒಂದೇ ಒಂದು ಕಣ್ಣು ಮಾತ್ರವಿದ್ದಿತು. ಅವನ ಎರಡು ಕಾಲುಗಳನ್ನು ಸುತ್ತಿಕೊಂಡು, ಆಗಾಗ ಕೋರೆ ಹಲ್ಲುಗಳನ್ನು ತೆರೆದು ತೆರೆದು ತೋರಿಸುವ ಒಂದು ಸರ್ಪವಿದ್ದಿತು. ಅವನ ಹಿಂಗಡೆ ತಲೆಯ ಮೇಲು ಭಾಗದಲ್ಲಿ ಕದಲಿಕೊಂಡು ಬರುವ ಮನುಷ್ಯನ ತಲೆ ಬುರುಡೆ! ಯಾವ ಆಧಾರವೂ ಇಲ್ಲದೆ ತನ್ನ ಹಿಂದೆಯೇ ಆ ತಲೆ ಬುರುಡೆಯನ್ನು ತೇಲಿಕೊಂಡು ಬರುವಂತೆ ಮಾಡಬೇಕಾದರೆ ಅವನೆಂತಹ ಮಹಾ ಮಾಂತ್ರಿಕನೋ! ಈ ಭಯಂಕರ ಸ್ವರೂಪದವನು ಕೊಳದ ದಂಡೆಯಲ್ಲಿ ನಿಂತುಕೊಂಡು ಸುತ್ತಲೂ ನೋಡಿ ತಲೆಯಾಡಿಸಿ, ಗುಡುಗಿನ ದನಿಯಿಂದ ಹೀಗೆಂಥನು : "ಹೇ! ಮಂತ್ರಮಯ ದ್ವೀಪ, ಎಕ್ಕೇ ಪೊದರಿನ ಗುಡ್ಡ, ಗುಡ್ಡದ ಕೊನೇ ಬಂಡೆ. ಆ ಬಂಡೇ ಮೇಲೆ ಹತ್ತಿ ನೋಡಿದರೆ ಏನು ಕಾಣುತ್ತದೋಯ್ ಕಂಕಾಳಾ ? ಥೂ ಮಂತ್ರಕಾಳಾ! ಹೇಳು ಹೇಳಾ!"

ಇದಕ್ಕೆ ಉತ್ತರವಾಗಿ ಆ ತಲೆ ಬುರುಡೆ ವಿಕಟಾಟ್ಟ ಹಾಸವಾಗಿ ಹಾರುತ್ತ ಸಿಳ್ಳಿನ ಧ್ವನಿಯಿಂಧ ಹೀಗೆಂದಿತು: "ನಟ್ಟ ನಡು ಸಮುದ್ರದಲ್ಲಿ ನಾಟ್ಯವಾಡುವ ನಾವೆ, ನಾವೆಯೊಳಗೆ ಧನರಾಶಿ. ನಾವೆಯ ಹೊರಗೆ ಕಾವಲು ಕಾಯುತ್ತಿದ್ದಾಳೆ ಮಿಂಚಿನ ಕಣ್ಣಿನ ಮಿಂಚಿನ ವೇಗದ ನಾಗಕನ್ಯೆ. ಆ ನಾಗಕನ್ಯೆಯನ್ನು ಹತಮಾಡಿ ಬಿಟ್ಟರೆ ಮತ್ತೆ ಯಾರೂ ಕೇಳುವವರಿಲ್ಲ. ನಾವೆಯಲ್ಲಿ ತುಂಬಿದ ಧನರಾಶಿಯಷ್ಟೂ ನಮ್ಮದೇ!"

"ಹೌದು. ಅಷ್ಟೊಂದು ಸಾಧಿಸಿಬಿಟ್ಟರೆ ಆ ಧನ ವೆಲ್ಲಾ ನಮ್ಮದೇ. ಆದರೆ ಕಂಕಾಳಾ! ಆ ಚತುರ್ನೇತ್ರ? ಹೂಂ. ಮೊದಲು ಅವನನ್ನು ಹತಮಾಡಬೇಕು." ಎಂದು ಹೂಂಕರಿಸಿದನು ಒಂಟಿ ಕಣ್ಣಿನವನು.




ಮರದ ಕೊಂಬೆಯಲ್ಲಿದ್ದು ಆ ಮಾತುಗಳನ್ನು ಕೇಳುತ್ತಿದ್ದ ಸಮರ ಸೇನನಿಗೆ ಒಂದು ಬದಿಯಲ್ಲಿ ಭಯವೂ, ಇನ್ನೊಂದು ಬದಿಯಲ್ಲಿ ಆಶ್ಚರ್ಯವೂ ಒಮ್ಮೆಗೇ ಉಂಟಾದುವು. ಈಗ ತಾವಿರುವುದು ಮಾಂತ್ರಿಕರ ದ್ವೀಪವೆಂದಾಯಿತು. ಈ ದ್ವೀಪದ ಒಂದಾನೊಂದು ಗುಡ್ಡದ ಬಂಡೇ ಮೇಲೆ ನಿಂತು ನೋಡಿದರೆ ಸಮುದ್ರದಲ್ಲಿ ಧನರಾಶಿಯೊಂದಿಗೆ ಕೂಡಿದ ನಾವೆಯೊಂದು ಕಾಣುತ್ತದೆ. ಅಪ್ರತಿಮ ಶಕ್ತಿಶಾಲಿನಿಯಾದ ನಾಗಕನ್ಯೆ ಅದನ್ನು ರಕ್ಷಿಸಿಕೊಂಡಿದ್ದಾಳೆ. ಇಷ್ಟು ತಿಳಿದುದರಿಂದ ಒಂದು ಆಶೆಯೂ ಹುಟ್ಟಿಕೊಂಡಿತು. ಧೂಮಕೇತುವಿನಿಂದ ಇಲ್ಲಿಯ ವರಿಗೆ ನಷ್ಟವಾಗಿ ತಮಗೆ ಲಾಭವಾಗುವುದೇನೋ ?

ಇನ್ನು ಆ ಚತುರ್ನೇತ್ರನು ಯಾರೊ ? ಈ ಒಂಟಿ ಕಣ್ಣಿನ ಭಯಂಕರದವನಿಗೂ, ಆ ಚತುರ್ನೇತ್ರನಿಗೂ ವೈರವೇಕೆ ಬಂದಿತು? ನಾವೆಯಲ್ಲಿರುವ ಧನರಾಶಿಯೇ ಅವರ ಶತ್ರುತ್ವಕ್ಕೆ ಕಾರಣವೇ? ಬರೀ ಧನರಾಶಿಯಲ್ಲ,




ಮಿಂಚಿನ ಕಣ್ಣಿನ ಹೆಣ್ಣು ನಾಗಕನ್ಯೆಯೂ ಇದ್ದಾಳೆ. ಅವೆರಡೂ ಜಗಳ ಕಾರಣಗಳೇ! ಅಥವಾ ಬೇರೇನಾದರೂ ಇರಬಹುದೆ?

ಸಮರಸೇನನು ಹೀಗೆ ಆಲೋಚಿಸುತ್ತಿರಲು, ಒಂಟಿ ಕಣ್ಣಿನ ಮಾಂತ್ರಿಕನು ಕೊಳದ ತೀರದಿಂದ ಕಾಡಿನೊಳಗೆ ಹೊರಟು ಹೋದನು. ಅವನನ್ನು ಅನುಸರಿಸಿಕೊಂಡೇ ಸರ್ಪವೂ, ತಲೆಬುರುಡೆಯೂ ಹೋದುವು.

ಆದುವರೆಗೂ ಮರದಮೇಲೆ ಗಡಗಡಿಸಿಕೊಂಡಿದ್ದ ಸೈನಿಕರು ಆ ಏಕಾಕ್ಷಿ ಹೊಟುಹೋದ ಮೇಲೆ, ಸ್ವಲ್ಪ ಉಸಿರು ಬಿಡಲು ಪ್ರಾರಂಭಿಸಿ, ಸಮರ ಸೇನನನ್ನು ನೋಡಿದರು, ನಾಲಗೆಯಿಂದ ತುಟಿಗಳನ್ನು ಸವರುತ್ತಾ. ಅವರು ಎಷ್ಟು ಹೆದರಿದ್ದಾರೆಂಬುದು ಸಮರಸೇನನಿಗೂ ಗೊತ್ತಾಯಿತು.

ಸೈನಿಕರಲ್ಲಿ ಒಬ್ಬನು ಗದಗದಿಸುವ ಕಂಠದಿಂದ, "ಈ ಒಕ್ಕಣ್ಣಿನವ ಬಹು ದೊಡ್ಡ ಮಂತ್ರವಾದಿಯಾಗಿರಬೇಕು. ಅವನ ಹಿಂದೆಯೇ ಹೋಗುವ ಕಾಲ ಸರ್ಪವನ್ನೂ ತಲೆ ಬುರುಡೆಯನ್ನೂ ನೋಡಿದರೆ ಎಂಥ ಧೈರ್ಯಶಾಲಿಗಾದರೂ ಭಯವಾಗುತ್ತದೆ. ಇಂತಹ ದ್ವೀಪದಿಂದ ನಾವು ಎಷ್ಟು ಬೇಗ ಪಾರಾದರೆ ಅಷ್ಟು ಒಳ್ಳೆಯದು!" ಎಂದನು. "ಹೌದು. ಜಾರಿಕೊಳ್ಳಲು ಇದೇ ಒಳ್ಳೇ ಸಮಯವೆಂದು ಕಾಣುತ್ತೆ!" ಎಂದನು ಇನ್ನೊಬ್ಬ ಸೈನಿಕ.

ಈ ಮಾತಿಗೆ ಸೇನಾಧಿಪತಿಯ ಬಾಯಿಯಿಂದ ಏನು ಉತ್ತರ ಬರುತ್ತದೋ ಎಂದು ಕೊಂಡು ಸೈನಿಕರು ಕಿವಿ ತೀಡಿಕೊಂಡು ಕುಳಿತಿದ್ದರು. ಆದರೆ ಸಮರಸೇನನು ಸುಮ್ಮನಿರುವುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಸಮರಸೇನನು ಸ್ವಲ್ಪ ಹೊತ್ತು ಸುಮ್ಮನಿದ್ದು, ಬಳಿಕ ತಲೆಯಾಡಿಸುತ್ತ, "ನಾವು ಸಾಹಸಕ್ಕಾಗಿಯೇ ಹೊರಟಿದ್ದೇವೆಂಬುದನ್ನು ಮರೆಯ ಬಾರದು. ಇಂತಹ ಭಯಂಕರ ದ್ವೀಪದಲ್ಲಿಯೂ ನಮಗೆ ಧನವು ಲಭಿಸುವ ಲಕ್ಷಣಗಳು ಕಾಣುತ್ತವೆ. ನಮಗೆ ಈಗ ಮುಖ್ಯವಾಗಿ ಇರಬೇಕಾದ್ದು, ಕಷ್ಟಗಳನ್ನು ಇದಿರಿಸುವ ಸಹನೆ, ಗುಂಡಿಗೆ ತುಂಬಾ ಧೈರ್ಯ, ಇವೆರಡೇ! ಧೈರ್ಯವಿರುವವರಿಗೇ ದೈವ ಸಹಾಯವೆಂಬುದನ್ನು ಗಟ್ಟಿಯಾಗಿ ನಂಬಿರಿ" ಎಂದನು.

ಹೀಗೆ ಹೇಳಿ ಸಮರ ಸೇನನು ಅವರ ಉತ್ತರವನ್ನು ಇದಿರು ನೋಡದೆ ಮರದಿಂದ ಕೆಳಗಿಳಿದನು. ಅವನ ಹಿಂದೆಯೇ ಸೈನಿಕರು ಕೂಡಾ ಕೆಳಗಿಳಿದರು. "ಇನ್ನು ಏನೇನನ್ನು ಸಂಧಿಸಬೇಕಾಗುತ್ತೋ" ಎಂಬ ಪ್ರಶ್ನೆ ಪ್ರತಿ ಸೈನಿಕನನ್ನೂ ಕಳವಳಗೊಳಿಸುತ್ತಿತ್ತು. ಆದರೂ ಅವನ ಮಾತಿನಿಂದ ಧೈರ್ಯಗೊಂಡು ಸಮರ ಸೇನನ ಆಜ್ಞೆಯನ್ನೇ ಅವರು ಕಾದು ಕೊಂಡಿದ್ದರು. ಬೇರೆ ಉಪಾಯವಾದರೂ ಏನಿದೆ?

ಸಮರಸೇನನು ಆ ಸೈನಿಕರ ಮುಖಗಳನ್ನು ಪರೀಕ್ಷಿಸಿ ನೋಡಿ, "ಕೇಳಿದಿರಪ್ಪ? ಮಂತ್ರಮಾಯ ದ್ವೀಪ, ಎಕ್ಕೇಪೊದರಿನದ ಗುಡ್ಡ, ಗುಡ್ಡದ ಕೊನೆಯ ಬಂಡೆ ಅಂತ ಆ ಒಕ್ಕಣ್ಣ ಮಾಂತ್ರಿಕನು ಹೇಳಿದ

ಮಾತುಗಳು? ಆ ಗುಡ್ಡವನ್ನು ಹುಡುಕಿ ಹಿಡಿದು ಬಿಟ್ಟೆವೆಂದರೆ, ನಾವು ಬಂದ ಕೆಲಸ ಬಹಳ ಮಟ್ಟಿಗೆ ನೆರವೇರಿದ ಹಾಗೆಯೇ! ಆಮೇಲೆ ಸಮಯಕ್ಕೆ ಸರಿಯಾಗಿ ಏನಾದರೂ ಉಪಾಯ ತೋರದಿರದು." ಎಂದನು.

ಆ ಮಾತುಗಳನ್ನು ಕೇಳಿ ಸೈನಿಕನೊಬ್ಬನು ಸಂದೇಹ ಪಡುತ್ತ, "ಆ ಮಾಂತ್ರಿಕ ಒಕ್ಕಣ್ಣನು ಹೇಳಿದ ಮಾತಿನಲ್ಲಿ ನಿಜವಿದೆಯೆಂದು ನಂಬುವಿರಾ? ಅದು ಎಂದಿನ ಸಂಗತಿಯೋ ಏನೋ! ಅಥವಾ ಅದೊಂದು ಮಂತ್ರದ ಪಲ್ಲವಿಯಾಗಿದ್ದರೂ ಇದ್ದೀತು. ಬೇರೆ ಯಾವ ದ್ವೀಪದ ಗುಡ್ಡವಿದ್ದರೂ ಇರಬಹುದು." ಎಂದನು.

ಹಾಗೆಲ್ಲಾ ಅನುಮಾನಿಸಿಕೊಂಡಿದ್ದರೆ ಯಾವ ಕಾರ್ಯವೂ ನೆರವೇರಲಾರದು. ಮಾಂತ್ರಿಕನು ಕೇಳಿದ ಪ್ರಶ್ನೆಗಳನ್ನೂ ಆ ತಲೆಬುರುಡೆ ಹೇಳಿದ ಉತ್ತರಗಳನ್ನೂ ನೋಡಿದರೆ ಎಲ್ಲಾ ನಂಬುವಂತೆಯೇ ಇದೆ. ಧನದಿಂದ ತುಂಬಿದ ನಾವೆಯನ್ನು ಒಬ್ಬಳು ನಾಗಕನ್ಯೆ ಕಾವಲು ಕಾಯುತ್ತಿದ್ದಾಳೆಂದೂ ಗೊತ್ತಾಗಿದೆ. ಚತುರ್ನೇತ್ರನೆಂಬವನು ಈ ಮಾಂತ್ರಿಕನಿಗೆ ಬದ್ಧ ಶತ್ರುವಾಗಿದ್ದಾನೆಂದೂ ತಿಳಿಯುತ್ತದೆ. ಆ ಧನ ನಾವೆಯ ಸುತ್ತಲೂ ಇರುವ ಇಷ್ಟೆಲ್ಲ ಪ್ರತಿಬಂಧಗಳನ್ನು ತಪ್ಪಿಸಿಕೊಂಡು ನಾವು ಆ ಧನರಾಶಿಯ ನಾವೆಯನ್ನು ವಶಪಡಿಸಿಕೊಳ್ಳಬೇಕು. ಅದು ಹೇಗೆಂಬುದೇ ನಮ್ಮ ಮುಂದಿರುವ ಮುಖ್ಯ ಸಮಸ್ಯೆ." ಎಂದನು ಸಮರಸೇನ.

ಸೈನಿಕರಿಗೇನೋ ಇದು ತೀರಲಾಗದ ಸಮಸ್ಯೆಯೇ ಅನಿಸಿತು. ತಮ್ಮ ನಾಯಕನಿಗೆ ತಕ್ಕ ಸಲಹೆ ಕೊಡಲಿಕ್ಕೆ ಅವರಾರಿಗೂ ಏನೂ ಗೊತ್ತಾಗಲಿಲ್ಲ. ತೋರಿದ್ದನ್ನು ಹೇಳುವ ಧೈರ್ಯವೂ ಇಲ್ಲ. ತುಫಾನಿನ ಘೋರತಾಂಡವದಿಂದ ಸಮುದ್ರಕ್ಕೆ ಹೆದರಿ ಭೂಮಿಗೆ ಬಂದರೆ, ಈಗ ಅದಕ್ಕಿಂತ ಹೆಚ್ಚಿನ ಭಯಂಕರವಾಗಿದೆಯಲ್ಲಾ! ಅವರ ಬುದ್ಧಿಗೆ ಕತ್ತಲೆ ಕವಿದಂತಾಗಿ ಸುಮ್ಮನಿದ್ದುಬಿಟ್ಟರು.






ಸಮರಸೇನನು ಒಮ್ಮೆ ಸುತ್ತಲೂ ನೋಡಿ ಮೌನವಾಗಿ ನಡೆಯ ತೊಡಗಿದನು. ಸೈನಿಕರೂ ಅವನನ್ನು ನಡೆಬೊಂಬೆಗಳ ಹಾಗೆ ಅನುಸರಿಸಿ ಕೊಂಡು ಹೋದರು. ಮರಗಳ ಬುಡದಲ್ಲಿ ಅವರು ಸ್ವಲ್ಪ ದೂರ ಹೋಗುವಷ್ಟರಲ್ಲಿ ಕಿವಿಗಳು ತೂತಾಗುವಂತೆ ಆಕಾಶದಲ್ಲಿ ಅರಚುವ ಶಬ್ದ ಹೊರಟಿತು! "ಓ! ಚತುರ್ನೇತ್ರಾ! ನೋಡು! ನೋಡೂ! ನರಮಾನವರು! ನರಾಧಮರು! ಪರಾಕ್! ಪರಾಕ್! ಬಹು ಪರಾಕ್!" ಮೇಲಿಂದ ಮೇಲೆ ಹೊರಟಿತು ಇದೇ ಕೂಗು. ಮಧ್ಯೆ ಮಧ್ಯೇ ವಿಕಾರವಾಗಿ ಕಿವಿಯನ್ನು ಹರಿಯುವಂತ ಕಿರಿಚಾಟ!

ಪರೀಕ್ಷಿಸಿ ನೋಡಿದಾಗ ಅದು ಕರ್ರಗಿನ ಗೂಗೆಯ ಧ್ವನಿಯೆಂದು ಗೊತ್ತಾಯಿತು. ಭೀತಾವಹವಾದ ಅದರ ಕೂಗನ್ನು ಕೇಳಿ ಸಮರಸೇನನೂ, ಸೈನಿಕರೂ ಸ್ತಬ್ಧರಾಗಿ ನಿಂತರು. ಪಕ್ಷಿಗಳಿಂದ ಮನುಷ್ಯರ ಹಾಗೆ ಮಾತಾಡಿಸ ಬಲ್ಲಂತಹ ಮಾಂತ್ರಿಕರ ಶಕ್ತಿ ಅದೆಂತಹುದೋ ಎಂದು ನೆನೆಯುತ್ತ ಬೆರಗಾದರು. ಭಯದೊಂದಿಗೆ ಏನೇನೋ ಅನುಮಾನಗಳೂ ಉಂಟಾದುವು. ಈ ಗೂಗೆ ಚತುರ್ನೇತ್ರನೆಂಬವನ ದೂತ ಪಕ್ಷಿಯಾಗಿರಬೇಕು. ಅದೀಗ ತಮ್ಮನ್ನು ನೋಡಿ ಬಿಟ್ಟಿದೆ. ಇನ್ನೇನು ಗಂಡಾಂತರ ಇದಿರಾಗುವುದೋ!

ಅಷ್ಟರಲ್ಲಿ ಸಮರಸೇನನಿಗೂ ಸೈನಿಕರಿಗೂ ಮತ್ತಿಷ್ಟು ಭ್ರಮೆಯನ್ನುಂಟು ಮಾಡುವಂತೆ, ದೊಡ್ಡದೊಂದು ಮರದ ಮೇಲಿನಿಂದ ಒಂದು ನರವಾನರವು ಅವರ ಮುಂದೆ ಧುಮುಕಿತು.

ಅದರಲ್ಲಿ ಮಾನವ ವಾನರ ಲಕ್ಷಣಗಳು ಸರಿಸಮವಾಗಿದ್ದುವು. ಅದುವರೆಗೆ ಆಕಾಶದಲ್ಲಿ ಹಾರಿಕೊಂಡಿದ್ದ ಕರೀಗೂಗೆ ಆ ನರವಾನರದ ಹೆಗಲಿನ ಮೇಲೆ ಎರಗಿ ಅದರ ಕಿವಿಯಲ್ಲಿ ಏನೋ ರಹಸ್ಯ ಮಾತು ಹೇಳಿತು. ಅದನ್ನು ಅರ್ಥಮಾಡಿಕೊಂಡಂತೆ ನರವಾನರವೂ ತಲೆಯಾಡಿಸಿತು.

ಆ ಮೇಲೆ ನರವಾನರವು ಸಮರಸೇನನನ್ನೂ, ಸೈನಿಕರನ್ನೂ ತಲೆ ಬಗ್ಗಿಸಿ ಪರೀಕ್ಷಿಸುವಂತೆ ನೋಡಿ, ಮರದಿಂದ ನೇತಾಡುವ ಬಳ್ಳಿಗಳನ್ನು ಹಿಡಿದು ನೇತಾಡುತ್ತ, ಒಂದು ಮರದಿಂದ ಇನ್ನೊಂದು ಮರಕ್ಕೆ ಹಾರುತ್ತ ಕ್ಷಣಮಾತ್ರದಲ್ಲಿ ಅದೃಶ್ಯವಾಗಿ ಹೋಯಿತು.

ಸೈನಿಕರಲ್ಲೊಬ್ಬನು ನರವಾನರವು ಕಾಣದೇಹೋದ ದಿಕ್ಕನ್ನೇ ನೋಡುತ್ತ, "ಸೇನಾನೀ ದೊರೆಗಳೇ, ಇನ್ನು ನಾವು ಹಿಂದಿರುಗಿಹೋಗುವುದೇ ಒಳ್ಳೇದು. ಹೆಜ್ಜೆಹೆಜ್ಜೆಗೂ ಭಯವನ್ನು ಹುಟ್ಟಿಸುವಂಥ ಈ ಮಂತ್ರಮಯ ದ್ವೀಪದಲ್ಲಿ ನಾವು ಸಾಧಿಸುವಂಥ ಕೆಲಸ ಯಾವುದೂ ಇರಲಾರದು. ಪಕ್ಷಿಗಳನ್ನೂ ಮೃಗಗಳನ್ನೂ ಚಾಕರಿಮಾಡಲು ಉಪಯೋಗಿಸಿ ಕೊಳ್ಳುವ ದೊಡ್ಡ ದೊಡ್ಡ ಮಾಂತ್ರಿಕರ ಶಕ್ತಿಗಳ ಮುಂದೆ ನಮ್ಮ ಕತ್ತಿಬಾಣಗಳೆಲ್ಲ ಹುಲ್ಲುಕಡ್ಡಿಗಳಿಗೆ ಸಮಾನವೇ. ಇಲ್ಲಿ ಮೃಗಪಕ್ಷಿಗಳೂ ಮನುಷ್ಯರೂ ಸರಿ ಸಮಾನ ಶಕ್ತಿಶಾಲಿಗಳೇ!" ಎಂದನು.




ಸಮರಸೇನನು ಸೈನಿಕರ ಮಾತುಗಳನ್ನು ಕೇಳಿಯೂ ಕೇಳದವನಂತೆ ಸುಮ್ಮನಿದ್ದನು, ಆ ಕಪ್ಪುಗೂಗೆ ಮರದಕೊಂಬೆಯಲ್ಲಿ ಮತ್ತೆ ಕಾಣಿಸಿತು. ಅದು ತನ್ನ ಕೆಂಡದ ಕಿಡಿಗಳಂತಹ ಕಣ್ಣುಗಳನ್ನು ಆಚೀಚೆ ತಿರುಗಿಸುತ್ತ ಸಮರಸೇನ ಮೊದಲಾವರನ್ನು ಗಮನಿಸಿ ಕೊಂಡೇ ಇದ್ದಿತು. ಅದಕ್ಕೆ ತಿಳಿಯದಂತೆ ಇನ್ನೇನೂ ಮಾಡಲು ಸಾಧ್ಯವಿಲ್ಲವೆನಿಸಿತು ಸಮರಸೇನನಿಗೆ. ಸೈನಿಕರಿಗಂತೂ ಬಾಯಿಯಲ್ಲಿ ಪಸೆಯೇ ಇಲ್ಲ. ತಮ್ಮ ಸಮಾಧಿ ಬೇಗದಲ್ಲೇ ಬರುವಂತೆ ಕಾಣಿಸು ತ್ತಿತ್ತು ಅವರಿಗೆ.

ಸಮರಸೇನನು ಆ ಗೂಗೆಯ ಕಡೆಗೇ ಒಂದೆರಡು ಕ್ಷಣ ಪರೀಕ್ಷಿಸಿ ನೋಡಿ, ಏನೋ ಉಪಾಯ ಕಂಡವ ನಂತೆ ತಲೆದೂಗುತ್ತ, ಪಕ್ಕದಲ್ಲಿದ್ದ ಸೈನಿಕನಿಂದ ಬಿಲ್ಲಂಬುಗಳನ್ನು ತೆಗೆದುಕೊಂಡು ತಟ್ಟನೆ ಆ ಕರಿಗೂಗೆಯ ಕಡೆಗೆ ಬಾಣದ ಗುರಿಯಿಟ್ಟನು. ಅದನ್ನು ನೋಡಿ ಸೈನಿಕರು ತತ್ತರಿಸಿದರು.

ಒಬ್ಬ ಸೈನಿಕನು ಸಾಹಸದಿಂದ ಬಾಯಿ ತೆರೆದು, "ಬೇಡ ದೊರೆಗಳೇ, ಆ ಮಂತ್ರಶಕ್ತಿಯ ಗೂಗೆಯನ್ನು ಹೊಡೆದರೆ ಅದಕ್ಕೇನೂ ಆಗಲಿಕ್ಕಿಲ್ಲ. ಅದರಿಂದ ಅದರ ಯಜಮಾನನಾದ ಮಾಂತ್ರಿಕನಿಗೆ ನಮ್ಮ ಮೇಲೆ ಇನ್ನಿಷ್ಟು ಕೋಪವೇಳುತ್ತದೆ. ಆಲೋಚಿಸಿರಿ ದೊರೇ ! ನಾವಾಗಿ ಕೋಪಕ್ಕೆ ದಾರಿ ತೆಗೆಯ ಬಾರದು." ಎಂದನು.

"ಆ ಸಂಗತಿ ಈಗಲೇ ಸ್ಪಷ್ಟವಾಗಿ ಬಿಡಲಿ !" ಎನ್ನುತ್ತ ಸಮರಸೇನನು ಬಾಣವನ್ನು ಕರಿಗೂಗೆಯ ಮೇಲೆ ಪ್ರಯೋಗಿಸಿಬಿಟ್ಟನು. ಬಾಣವು ರಿವ್ವನೆ ಹೋಗಿ ಗೂಗೆಗೆ ತಾಗಿತು. ಅದು ತಪ್ಪಿಸಿಕೊಳ್ಳುವ ಪ್ರಯತ್ನವೇ ಮಾಡಿದಂತಿಲ್ಲ. ಬಾಣದೇಟಿನಿಂದ ಅದು ಕೆಳಗೆಬಿದ್ದು ವಿಲಿವಿಲಿ ಒದರಾಡುವುದೆಂದು ಕೊಂಡರೆ, ಹಾಗೂ ಆಗಲಿಲ್ಲ. ಯಾವುದೋ ಕಡ್ಡಿ ಗಾಳಿಗೆ ಹಾರಿಬಂದು ತಾಗಿದಂತಾಗಿತ್ತು. ಸೈನಿಕನ ಅನುಮಾನವೇ ನಿಜವಾಯಿತು. ಸಮರಸೇನನು ಆಶ್ಚರ್ಯದಿಂದ ಕೈ ಕಚ್ಚಿಕೊಂಡನು.

ಕರಿಗೂಗೆ ತನ್ನ ಶರೀರಕ್ಕೆ ಚುಚ್ಚಿಕೊಂಡ ಬಾಣ ವನ್ನು ಅಲಕ್ಷ್ಯವಾಗಿ ಕೊಕ್ಕಿನಿಂದ ಹೊರಕ್ಕೆಳೆದು ದೂರಬಿಸುಟು ಖಿಗಖಿಗನೆ ನಕ್ಕಿತು. ಆ ಮೇಲೆ ಕರ್ಣಕಠೋರವಾಗಿ ಒಮ್ಮೆ ಅರಚಿ, "ಎಲವೋ ನರಾಧಮರೇ ! ನನ್ನನ್ನು ಕೊಲ್ಲಲು ನೋಡುವಿರಾ ? ಮಹಾಶಕ್ತಿವಂತನೆಂದುಕೊಂಡ ಆ ಏಕಾಕ್ಷಿ ಮಾಂತ್ರಿ ಕನೇ ನನ್ನನ್ನು ಏನೂ ಮಾಡಲಾರದೆ ಹೋಗಿದ್ದಾನೆ. ಅವನ ಮುಂದೆ ನೀವೆಷ್ಟರವರು ? ಪರದೇಶದ ಹುಲು ಮಾನವರು ನೀವು! ತಡೆಯಿರಿ, ತಡೆಯಿರಿ. ನಮ್ಮ ಚತುರ್ನೇತ್ರನು ಬಂದು ನಿಮ್ಮ ನೆತ್ತರು ಹೀರುವ ಶುಭಗಳಿಗೆ ಸಮೀಪಿಸುತ್ತಾ ಇದೆ!" ಎಂದು ಹಂಗಿಸಿತು.

ಅದರ ಮಾತು ಕೇಳುವಾಗ ತಾನೂ ತನ್ನ ಕಡೆಯ ವರೂ ಎಂತಹ ಆಪತ್ತಿನಲ್ಲಿ ಸಿಕ್ಕಿಕೊಂಡಿರುವೆವೆಂಬುದು

ಅರ್ಥವಾಯಿತು ಸಮರಸೇನನಿಗೆ. ಇನ್ನು ನಿಂತಿರುವುದರಲ್ಲಿ ಯಾವ ಅರ್ಥವೂ ಇಲ್ಲ.

ಅವನು ಸೈನಿಕರಿಗೆ ಸನ್ನೆ ಮಾಡಿ ಅಲ್ಲಿಂದ ವೇಗವಾಗಿ ಓಡಲು ತೊಡಗಿದನು. ಸೈನಿಕರೂ ಅಷ್ಟೇ! ಆದರೆ ಯಾವುದರ ಕಣ್ಣು ತಪ್ಪಿಸಬೇಕೆಂದು ಅವರು ಓಡುವರೋ ಆ ಗೂಗೆ ಅವರನ್ನನುಸರಿಸಿಕೊಂಡೇ ಹಾರುತ್ತ ಅರಚುತ್ತ ಬೆನ್ನು ಹತ್ತಿತ್ತು.

ಬೇಗನೇ ಸಮುದ್ರತೀರವನ್ನು ಸೇರಿ ತಮ್ಮ ಹಡಗನ್ನೇರಿಕೊಂಡು ಆ ಭಯಂಕರ ದ್ವೀಪದಿಂದ ಹೊರಟು ಹೋಗಬೇಕೆಂದು ಸಮರಸೇನನು ನಿಶ್ಚಯಿಸಿದನು. ಆದರೆ ಗೂಗೆಯ ಅರಚಾಟದಿಂದಲೂ, ಯಾವ ಮಾಂತ್ರಿಕನೋ ಬಂದುಬಿಡುವನೆಂಬ ಭಯದಿಂದಲೂ ದಾರಿತಪ್ಪಿ ಅರಣ್ಯದಲ್ಲಿ ಬಹುದೂರ ಓಡಿದರು. ಓಡಿಯೋಡಿ ಕಾಲುನೋವು ಹುಟ್ಟಲು ಒಂದು ಕಡೆ ನಿಂತರು, ಉಸಿರು ಬಿಡುತ್ತಾ!

ಸಮರಸೇನನು ಆಚೀಚೆ ನೋಡಿದನು. ತಾವು ಯಾವ ಸ್ಥಳದಲ್ಲಿ ಹಡಗಿನಿಂದಿಳಿದೆವೋ, ಈಗ ಯಾವ ದಿಕ್ಕಿಗೆ ಬಂದಿದ್ದೇವೋ ಎಂಬುದು ಅವನಿಗೆ ಗೊತ್ತಾಗಲಿಲ್ಲ. ಗೂಗೆಯ ಅರಚಾಟ ಅವನ ತಲೆಯನ್ನೇ ಕೆಡಿಸಿಹಾಕಿತ್ತು.

"ನಾವು ಎಲ್ಲಿಂದ ಎಲ್ಲಿಗೆ ಬಂದೆವೋ ಗೊತ್ತಾಗಲಿಲ್ಲ. ಮುಖ್ಯವಾಗಿ ನಾವೇನೂ ಮಾಡದೆಯೇ ಈ ದ್ವೀಪದಲ್ಲಿರುವ ಯಾವನೋ ಮಾಂತ್ರಿಕನಿಗೆ ವಿರೋಧಿಗಳಾದೆವು. ಈ ಪರಿಸ್ಥಿತಿಯಲ್ಲಿ ನಮ್ಮನ್ನು ಕುಂಡಲಿನೀ ದೇವಿಯ ಹೊರತು ಬೇರೆ ಯಾರೂ ಕಾಪಾಡಲಾರರು" ಎಂದನು ಸಮರಸೇನ.

"ಸೇನಾನೀ ದೊರೆಗಳೇ, ನಾವು ಯಾವ ವಿಧದಿಂದಾರೂ ಈ ಗೂಗೆಯ ಕಣ್ಣಿನಿಂದ ತಪ್ಪಿಸಿಕೊಳ್ಳಲೇ ಬೇಕು." ಎಂದನೊಬ್ಬ ಸೈನಿಕ.

ಸಮರಸೇನನು ಏನೋ ಹೇಳಬೇಕನ್ನುವಷ್ಟರಲ್ಲಿ, "ಓ ಕಾಲಭುಜಂಗಾ! ಕಂಕಾಳಾ!" ಎಂದು ಅರಣ್ಯವೆಲ್ಲಾ ಪ್ರತಿಧ್ವನಿಸುವಂತಹ ಶಬ್ದ ಕೇಳಿತು, ಒಕ್ಕಣ್ಣಿನ ಮಂತ್ರವಾದಿಯದು!

ಆ ಶಬ್ದವನ್ನು ಕೇಳುತ್ತಲೇ ಚತುರ್ನೇತ್ರನ ಬಂಟನಾದ ಕರೀಗೂಗೆ ಒಂದು ಆರ್ತನಾದ ಮಾಡಿ ಭರ್ರನೆ ಎತ್ತೋ ಹಾರಿಹೋಯಿತು. ಈ ಒಕ್ಕಣ್ಣಿನ ಮಂತ್ರವಾದಿಯೇ ಹೆಚ್ಚಿನ ಬಲಿಷ್ಠನೆಂದು ಈಗ ಸ್ಪಷ್ಟವಾಯಿತು.

ಅಕಸ್ಮಾತ್ತಾಗಿ ಗೂಗೆಯ ಪೀಡೆ ಕಳೆಯಿತೆಂಬ ಸಮಾಧಾನವಾದರೂ, ಇನ್ನೊಂದು ಕಡೆಯಿಂದ ಕೇಳಿಬಂದ ಏಕಾಕ್ಷಿ ಮಾಂತ್ರಿಕನ ಕಂಠ ಧ್ವನಿ, ಸಮರಸೇನಾದಿಗಳನ್ನು ಹೆದರಿಸಿತು. ಕೂಡಲೇ ಅವರೆಲ್ಲ ಆ ಕಂಠ ಧ್ವನಿಯ ವಿರುದ್ಧ ದಿಕ್ಕನ್ನು ಹಿಡಿದು ಶಕ್ತಿಯಿದ್ದಷ್ಟೂ ವೇಗವಾಗಿ ಓಡತೊಡಗಿದರು. (ಇನ್ನೂ ಇದೆ)






# ಭ್ರಾತೃಹಂತಕ

ಎಷ್ಟು ಸಾರಿ ಓಡಿದರೂ ಆ ಮರದ ಕೊಂಬೆಗಿಂತ ಮೇಲೆ ಓಡಲಾಗದ ಬೇತಾಳವನ್ನು ಮತ್ತೆ ಹಿಡಿದು ತರಲು ರಾಜಾ ತ್ರಿವಿಕ್ರಮನು ಎಂದಿನಂತೆ ಹಿಂದಿರುಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೆ ಹಾಕಿಕೊಂಡು ಮೌನದಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡ ಬೇತಾಳವು ಮಾತಾಡಲು ತೊಡಗಿ, "ರಾಜನೇ, ಈ ಪ್ರಪಂಚದ ಮಾನವರ ಜೀವಿತಕಾಲವಷ್ಟೂ ಕೇವಲ ಸ್ವಾರ್ಥಮೂಲವಾಗಿದ್ದು, ಪ್ರತಿ ವ್ಯಕ್ತಿಯೂ ಏನೋ ಒಂದು ಸ್ವಾರ್ಥದಿಂದಲೇ ಪ್ರೇರೇಪಿಸಲ್ಪಡುತ್ತಾನೆ. ಈ ಸ್ವಾರ್ಥ ಪ್ರೇರಣೆಗಳಲ್ಲಿ ಮುಖ್ಯವಾದುವು ರಾಜ್ಯವೂ ರಮಣಿಯೂ ಎಂಬುದಕ್ಕೆ ಉದಾಹರಣೆಯಾಗಿ ಚಂದ್ರಸೇನನೆಂಬವನ ಕಥೆ ಜ್ಞಾಪಕಕ್ಕೆ ಬರುತ್ತದೆ. ಆ ಕಥೆಯನ್ನು ಕೇಳಿ ನಿನಗೆ ಇವೆರಡರಲ್ಲಿ ಯಾವುದರ ಪ್ರೇರೇಪಣೆ ಇದೆಯೋ ನೋಡಿಕೋ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ಹಿಂದೆ ಅಮರಾವತಿ ಎಂಬ ರಾಜ್ಯಕ್ಕೆ ಅಮರಸೇನನೆಂಬವನು ಯೌವನದ ಪ್ರಾರಂಭ ದಶೆಯಲ್ಲಿಯೇ

## ಬೇತಾಳಕಥೆಗಳು?..



ಅಮರಸೇನನಿಗೆ ಮಾತ್ರ ಕಳುಹಿಸಲಿಲ್ಲ. ಇದು ಅಮರ ಸೇನನಿಗೆ ದೊಡ್ಡ ಅವಮಾನವೆನಿಸಿತು. ಅವನು ಕಾಟಮರಾಜನು ಮಾಡಿದ ಈ ಅವಮಾನವನ್ನು ಕುರಿತು ತನ್ನ ಮಂತ್ರಿಯೊಂದಿಗೆ ಚರ್ಚಿಸಿದನು.

"ಇದರಲ್ಲಿ ಅವಮಾನವೇನಿದೆ? ಕಾಟಮರಾಜನು ನಮ್ಮ ಬದ್ಧ ಶತ್ರು ತಾನೇ? ಅವನು ಆಹ್ವಾನ ಕಳುಹಿಸ ಲಿಲ್ಲವೆಂದು ನಾವು ಚಿಂತಿಸುವ ಅಗತ್ಯವಿಲ್ಲ. ಒಂದು ವೇಳೆ ಅವನು ಆಹ್ವಾನ ಕಳುಹಿಸಿದ್ದರೂ ನಾವು ಅಲ್ಲಿಗೆ ಹೋಗುವುದು ಸರಿಯೂ ಅಲ್ಲ. ಏಕೆಂದರೆ ಶತ್ರು ವಾದವನು ಒಳ್ಳೆಯ ರೀತಿಯಲ್ಲಿ ಕರೆದು ಮೋಸದಿಂದ ಪ್ರಾಣ ತೆಗೆಯಲೂ ಬಹುದು" ಎಂದನು ಮಂತ್ರಿ.

ಆದರೆ ಮಂತ್ರಿಯ ಮಾತು ಅಮರಸೇನನಿಗೆ ರುಚಿಸಲಿಲ್ಲ. ಕಾಟಮರಾಜನ ಆಹ್ವಾನದಲ್ಲಿ ವಿವಾಹಕ್ಕೆ ಇಷ್ಟವಿದ್ದವರು ಮುಂದಾಗಿ ತಮ್ಮ ಚಿತ್ರಪಟಗಳನ್ನು ಕಳುಹಿಸಬಹುದೆಂಬ ಸೂಚನೆಯೂ ಇದ್ದುದರಿಂದ, ಅನೇಕ ರಾಜಕುಮಾರರು ತಮ್ಮ ಚಿತ್ರಪಟಗಳನ್ನೂ ಕಳುಹಿಸುತ್ತಿದ್ದರು. ಅವರಂತೆ ಅಮರಸಿಂಹನು ಕೂಡಾ ತನ್ನ ಚಿತ್ರಪಟವನ್ನು ಕಾಟಮರಾಜನ ಬಳಿಗೆ ತನ್ನ ಭಟರ ಮೂಲಕ ಕಳುಹಿಸಿಕೊಟ್ಟನು.

ಕಾಟಮರಾಜನು ಆ ಚಿತ್ರಪಟವನ್ನು ಪಡೆದ ಕೂಡಲೇ ಕೋಪಾತಿರೇಕದಿಂದ ಅದನ್ನು ನೆಲಕ್ಕೆ ಬಡೆದು, ತನ್ನ ಪಾದರಕ್ಷೆಗಳಿಂದ ಅದರ ಮೇಲೆ ಹೊಡೆದು ತಂದವರ ಕೈಗೇ ಅದನ್ನು ತಿರುಗಿಕೊಟ್ಟು, "ಇದನ್ನು ಒಯ್ದು ನಿಮ್ಮ ರಾಜನಿಗೇ ಕೊಡಿರಿ" ಎಂದು ಕಳುಹಿಸಿಬಿಟ್ಟನು.

ಕಾಟಮರಾಜನು ತನ್ನ ಮೇಲೆ ತೋರಿಸಿದ ಅವಮರ್ಯಾದೆಯನ್ನು ಕೇಳಿ ಅಮರಸೇನನು ಬಾಲ ತುಳಿದ ಕಾರ್ಕೋಟಕದಂತಾದನು. ಕೂಡಲೇ ಕಾಟಮ ರಾಜನ ಮೇಲೆ ಯುದ್ಧವನ್ನು ಪ್ರಕಟಿಸಿ, ತಯಾರಾಗ ತೊಡಗಿದನು. ಈ ಸಂಗತಿ ಕೇಳಿದ ಕೂಡಲೇ ಕಾಟಮ ರಾಜನು ಅಮರಸೇನನ ತಲೆ ಕಡಿದು ತಂದುಕೊಟ್ಟ

ರಾಜನಾದನು. ಆ ಕಾಲದಲ್ಲಿ ಕಾಳೀಕೋಟೆಗೂ ಅಮರಾವತಿಗೂ ಹಳೆಯ ಕಾಲದಿಂದಲೂ ಶತ್ರುತ್ವ ವಿದ್ದಿತು. ಅಮರಸೇನನ ತಂದೆಯ ಕಾಲದಲ್ಲಿ ಕಾಳೀ ಕೋಟೆಯ ರಾಜನು ಅಮರಾವತಿಯ ಕಡೆಗೆ ಕಣ್ಣೆತ್ತಿ ನೋಡಲೂ ಶಕ್ತನಲ್ಲದೆ ಹೋದನು. ಈಗ ಅಮರ ಸೇನನು ಹೊಸದಾಗಿ ರಾಜನಾಗಿ ಅನುಭವವಿಲ್ಲದ ಹುಡುಗನೆಂಬ ಧೈರ್ಯದಿಂದ ಕಾಳೀಕೋಟೆಯ ಕಾಟಮರಾಜನು ಅಮರಾವತಿಯ ಮೇಲೆ ದಂಡೆತ್ತಿ ಬಂದು, ಅಮರಸೇನನ ಕೈಯಲ್ಲಿ ಭಾರಿ ಪೆಟ್ಟು ತಿಂದು ಪೂರ್ತಿ ಸೋತು ಓಡಿಹೋದನು.

ಇದು ನಡೆದು ಒಂದು ವರ್ಷದೊಳಗೆ ಕಾಟಮ ರಾಜನ ಮಗಳು ಮಣಿಮಾಲೆಗೆ ಸ್ವಯಂವರ ಪದ್ಧತಿ ಯಲ್ಲಿ ವಿವಾಹದ ಏರ್ಪಾಡು ಪ್ರಾರಂಭವಾಯಿತು. ಮಣಿಮಾಲೆಗೆ ತ್ರಿಲೋಕಸುಂದರಿ ಎಂಬ ಖ್ಯಾತಿ ಇದ್ದಿತು. ಅವಳ ಸ್ವಯಂವರಕ್ಕೆ ಕಾಟಮರಾಜನು ಎಲ್ಲಾ ರಾಜರಿಗೂ ಆಹ್ವಾನ ಕಳುಹಿಸಿದನು. ಆದರೆ

ವರಿಗೇ ತನ್ನ ಕುಮಾರಿಯನ್ನು ಕೊಟ್ಟು ಮದುವೆ ಮಾಡುವೆನೆಂದು ಪ್ರಕಟಪಡಿಸಿದನು.

ಅತ್ಯಂತ ಸುಂದರಿಯಾದ ಮಣಿಮಾಲೆಯನ್ನು ಹೇಗೆ ಮದುವೆ ಮಾಡಿಕೊಳ್ಳುವುವೆಂದು ಮಥನ ಪಡುತ್ತಿದ್ದ ರಾಜಕುಮಾರರೆಲ್ಲಾ, ಒಮ್ಮೆಗೇ ಹುಚ್ಚೆದ್ದು ತಮ್ಮ ತಮ್ಮ ಸೇನೆಗಳೊಂದಿಗೆ ಅಮರಾವತಿಯ ಕಡೆಗೆ ಹೊರಟರು.

ಆ ಸಮಯಕ್ಕೆ ಅಮರಸೇನನ ತಮ್ಮನಾದ ಚಂದ್ರಸೇನನೆಂಬವನು ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿಕೊಂಡಿದ್ದನು. ತನ್ನ ಅಣ್ಣನ ಮೇಲೆ ಬರಲಿರುವ ಅಪಾಯದ ವಿವರಗಳನ್ನು ಕೇಳಿ, ಅವನು ಕೂಡಲೇ ಹೊರಟು ಮನೆಗೆ ಬಂದನು. ಆಗ ಒಬ್ಬೊಬ್ಬ ರಾಜಕುಮಾರನೂ ತನ್ನ ಸೇನೆಯೊಂದಿಗೆ ಬರುವ ಸಮಾಚಾರವನ್ನು ಕಿವಿ ತುಂಬಾ ಕೇಳಿದನು. ಕೋಟೆಯ ಬುರುಜಿನ ಮೇಲೆ ನಿಂತು ನೋಡಿದರೆ ನಾಲ್ಕು ದಿಕ್ಕುಗಳಿಂದಲೂ ಸೇನೆಗಳು ಬರುತ್ತಿರುವುದು ಕಾಣುತ್ತಿದ್ದಿತು. ಅವುಗಳನ್ನು ನೋಡಿ ಅಮರಸೇನನು ಹೆದರಿ, ಚಂದ್ರಸೇನನಿಗೆ ತೋರಿಸುತ್ತ ತಪ್ಪಿಸಿಕೊಳ್ಳುವ ಬಗೆಯನ್ನು ಕುರಿತು ಮಾತಾಡುತ್ತಿದ್ದನು.



ಆಗ ಚಂದ್ರಸೇನನು ಅಕಸ್ಮಾತ್ತಾಗಿ ಕತ್ತಿ ಹಿರಿದು ತನ್ನ ಪಕ್ಕದಲ್ಲಿ ನಿಂತಿದ್ದ ಅಣ್ಣನ ತಲೆಯನ್ನು ಕಡಿದು, ಅವನ ಮುಂಡವನ್ನು ಕೋಟೆಯ ಕೆಳಗೆ ಬೀಸಿ ಬಿಸುಟನು.

ಆ ಮುಂಡವನ್ನು ದಂಡೆತ್ತಿ ಬಂದ ರಾಜಕುಮಾರರೆಲ್ಲಾ ನೋಡಿ, ಅಮರಸೇನನ ತಲೆಯನ್ನು ಯಾರೋ ಮೊದಲೇ ಕೊಯ್ದುಬಿಟ್ಟರೆಂದೂ, ಇನ್ನು ತಮಗೆ ಮಣಿಮಾಲೆಯನ್ನು ಮದುವೆಯಾಗುವ ಅವಕಾಶ ವಿಲ್ಲವೆಂದೂ ತಿಳಿದುಕೊಂಡು ನಿರಾಶೆಯಿಂದ ತಮ್ಮ ತಮ್ಮ ಸೇನೆಗಳೊಂದಿಗೆ ಹಿಂದಿರುಗಿದರು.

ತರುವಾಯ ಚಂದ್ರಸೇನನು ತನ್ನ ಅಣ್ಣನ ತಲೆಯನ್ನು ತೆಗೆದುಕೊಂಡು ಹೋಗಿ ಕಾಟಮರಾಜನಿಗೆ ತೋರಿಸಿ, ಮಣಿಮಾಲೆಯನ್ನು ಮದುವೆಯಾಗಿ, ತಾನೇ ರಾಜನೂ ಆದನು. ಈ ನೆಂಟಸ್ತಿಕೆಯಿಂದ ಕಾಟಮರಾಜನ ವೈರ ತೀರಿಹೋಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ಚಂದ್ರಸೇನನು ತನ್ನ ಅಣ್ಣನನ್ನು ಘಾತುಕರೀತಿಯಲ್ಲಿ ಕೊಲೆಮಾಡಿದುದರಲ್ಲಿ ಅವನ ಉದ್ದೇಶವು ಎಂತಹುದು? ಮೊದಲೇ ನಿಶ್ಚಿತ ಮಾಡಿಕೊಂಡಿದ್ದನೋ? ಮಣಿಮಾಲೆಯಂಥ ಸುಂದರಿಯನ್ನು ತಾನೇ ವರಿಸಿಕೊಳ್ಳಬೇಕೆಂದು ಹಾಗೆ ಮಾಡಿದನೊ? ಅಥವಾ ಅಣ್ಣನನ್ನು ಕೊಂದು ತಾನೇ ರಾಜನಾಗಬೇಕೆಂಬುದೇ ಅವನ ಉದ್ದೇಶವೆ? ತನ್ನ ಬದ್ಧಶತ್ರುವಾದ ಅಮರಸೇನನ ತಮ್ಮನೆಂದು ಗೊತ್ತಿದ್ದು ಕೂಡಾ ಕಾಟಮರಾಜನು ಚಂದ್ರಸೇನನಿಗೆ ತನ್ನ ಕುಮಾರಿಯನ್ನು ಏತಕ್ಕೆ ಕೊಟ್ಟು ಮದುವೆ ಮಾಡಿದನು? ಈ ಸಂದೇಹಗಳಿಗೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆಯೊಡೆದು

ಪುಡಿ ಪುಡಿಯಾಗಿ ಹೋಗುತ್ತದೆ; ಜಾಗ್ರತೆ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಕ್ರೋಧಾವೇಶದಿಂದ ಅಮರಸೇನನು ಕಾಟಮರಾಜನ ಮೇಲೆ ಯುದ್ಧವನ್ನು ಪ್ರಕಟಿಸಿ ತನ್ನ ಮರಣವನ್ನು ತಾನೇ ತಂದುಕೊಂಡನು. ಅವನು ಮಂತ್ರಿಗಳ ಆಲೋಚನೆಯನ್ನು ಪಾಲಿಸಬೇಕಿತ್ತು. ಕಾಟಮರಾಜನು ತನಗಿಂತ ಬಲಹೀನನೆಂದಷ್ಟೇ ಆಲೋಚಿಸಿದನಲ್ಲದೆ, ಮಣಿಮಾಲೆಯ ಸೌಂದರ್ಯದ ಮೂಲಕವಾಗಿ ಅನೇಕ ಮಂದಿ ರಾಜರು ಕಾಟಮರಾಜನ ಪಕ್ಷದವರಾಗುವರೆಂದು ಅವನಿಗೆ ತೋರಲಿಲ್ಲ. ಅವನು ಅಷ್ಟು ಮಂದಿಗಳೊಂದಿಗೆ ಯುದ್ಧಮಾಡಿ ಜಯಿಸುವ ಸ್ಥಿತಿಯಲ್ಲಿ ಇರಲಿಲ್ಲ. ಆ ಕಾರಣದಿಂದ ಅವನಿಗೆ ಸಾವು ಬರುವುದು ನಿಶ್ಚಯವೇ ಆಗಿತ್ತು. ಆ ಸಂಗತಿಯನ್ನು ತಿಳಿದುಕೊಂಡ ಚಂದ್ರಸೇನನು ತನ್ನ ಅಣ್ಣನನ್ನು ಇತರರು ಕೊಲ್ಲುವುದಕ್ಕಿಂತ ತಾನೇ ಕೊಲ್ಲುವುದರಲ್ಲಿರುವ ಲಾಭವನ್ನು ತಿಳಿದುಕೊಂಡನು. ಆದುದರಿಂದ ಅಣ್ಣನನ್ನು ಕೊಲ್ಲುವ ಯೋಚನೆ ಮೊದಲಿನಲ್ಲಿ ಅವನಿಗೇನಿರಲಿಲ್ಲ. ಈಗ ಅಣ್ಣನೂ ಹೋಗಿ, ಹೆಣ್ಣೂ ಹೋಗಿ, ರಾಜ್ಯವೂ ಪರರಿಗಾಗುವ ಪ್ರಸಂಗ ಬಂದಿದೆ. ತಾನೇ ಅಣ್ಣನನ್ನು ಕೊಂದರೆ ರಾಜ್ಯವೂ ದಕ್ಕುತ್ತದೆ; ಕಾಟಮರಾಜನೊಂದಿಗೆ ಯುದ್ಧ ತಪ್ಪುತ್ತದೆ. ಬಲಹೀನನಾಗಿದ್ದು ಕೂಡಾ ಈ ಮೊದಲು ಯುದ್ಧಕ್ಕೆ ಕಾಲು ಕೆದರಿ ಸೋತುಹೋದವನು ಕಾಟಮರಾಜನೇ. ಅವನಿಗೆ ತಾನು ಅಳಿಯನಾಗಿಬಿಟ್ಟರೆ ಕಾಟಮರಾಜನು ತಣ್ಣಗಾಗುತ್ತಾನೆ. ಅದೇ ಇನ್ನೊಬ್ಬನು ಅಳಿಯನಾದರೆ ಆ ಅಳಿಯನ ಸಹಾಯದಿಂದ ಕಾಟಮರಾಜನು ಅಮರಾವತಿಯ ಮೇಲೆ ದಂಡೆತ್ತುತ್ತಾ ಇರುತ್ತಾನೆ. ಈ ಕಾರಣಗಳಿಂದ ಚಂದ್ರಸೇನನ ಆಲೋಚನೆ ತಿಳಿಯಾದುದೇ ನಿಜ. ಕಾಟಮರಾಜನು ತನ್ನ ಮಾತನ್ನು ನಡೆಸುವುದರಿಂದ ಅವನಿಗಾಗುವ ನಷ್ಟವೇನಿಲ್ಲ. ತನ್ನ ಕುಮಾರಿಯನ್ನು ಚಂದ್ರಸೇನನಿಗೆ ಕೊಡದೆ, ಮತ್ತೆ ಸ್ವಯಂವರದ ಏರ್ಪಾಡು ಮಾಡಿದರೆ ಆಮೇಲೆ ಅವನ ಮಾತಿಗೆ ರಾಜರೊಳಗೆ ಯಾವ ಬೆಲೆಯೂ ಇರುವುದಿಲ್ಲ. ಕಾಟಮರಾಜನು ಅಮರಸೇನನ ತಲೆಯನ್ನು ತಂದುಕೊಟ್ಟವರಿಗೇ ಮಗಳನ್ನು ಕೊಡುವನೆಂಬ ನಂಬುಗೆಯಲ್ಲಿಯೇ ಅವರೆಲ್ಲಾ ಅಮರಸೇನನ ಮೇಲೆ ದಂಡೆತ್ತಿದ್ದರು. ಅಷ್ಟೇಹೊರತು ಅವರಾರಿಗೂ ಅಮರಸೇನನ ಮೇಲೆ ಶತ್ರುತ್ವವೇನಿದ್ದಿಲ್ಲ. ಆದುದರಿಂದ ಕಾಟಮರಾಜನು ಮಾಡಿದ ಕೆಲಸವೂ ವಿವೇಕದಿಂದ ಕೂಡಿದುದೇ ಸರಿ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ಕಳ್ಳನ ಗೆಲುವು

ಹಿಂದೆ ಕುಬೇರನೆಂಬೊಬ್ಬ ರಾಜನಿದ್ದ. ಅವನ ರಾಜ್ಯದಲ್ಲಿ ಶ್ರೀಮಂತರೇ ಹೆಚ್ಚಾಗಿದ್ದರು. ಬಡವರು ಬಹಳ ಕಡಿಮೆ. ಹೊಲ ಗದ್ದೆಗಳು ಪುಷ್ಕಳವಾಗಿ ಬೆಳೆಗಳನ್ನು ಕೊಡುತ್ತಿದ್ದುವು. ರಾಜನು ಪ್ರಜೆಗಳನ್ನು ಕುರಿತು ಯೋಚಿಸುವುದನ್ನು ಬಿಟ್ಟು, ತನ್ನ ಕಾಲವನ್ನೆಲ್ಲಾ ವಿನೋದ ವಿಲಾಸಗಳಿಂದಲೇ ಕಳೆಯುತ್ತ, ರಾಜ್ಯಪಾಲನೆಯ ಭಾರವನ್ನು ಉದ್ಯೋಗಸ್ಥರಿಗೇ ಬಿಟ್ಟುಬಿಟ್ಟನು. ಅವರು ಕೂಡಾ ಆರಾಮವಾಗಿದ್ದು, ವಿಲಾಸಗಳಿಗೆ ದಾಸರಾಗಿ ಪರಿಪಾಲನೆಯನ್ನು ಕುರಿತು ಅಲಕ್ಷ್ಯವಾಗಿಯೇ ಇದ್ದರು. ಆದುದರಿಂದ ದೇಶದಲ್ಲಿ ಧನಧಾನ್ಯಗಳು ಸ್ವಮೃದ್ಧಿಯಾಗಿದ್ದರೂ, ಅವುಗಳು ಸರಿಯಾಗಿ ವಿನಿಯೋಗವಾಗದೆ, ಸಿಗಬೇಕಾದವರಿಗೆ ಸಿಗದೆ ಸಾಧಾರಣ ಪ್ರಜೆಗಳು ಹಸಿವೆಯಿಂದ, ಬಡತನದ ಬೇಗೆಯಿಂದ ಬಳಲಿಕೊಂಡೇ ಇದ್ದರು.

ಹೀಗಿರುವಾಗ ಆ ರಾಜ್ಯದಲ್ಲಿ ಸುಚೋರನೆಂಬ ಕಳ್ಳನೊಬ್ಬ ತನ್ನ ಕೆಲಸ ಮಾಡಿಕೊಂಡಿದ್ದನು. ಕಳ್ಳತನವೆಂಬುದು ಅವನ ವಂಶಪಾರಂಪರ್ಯದ ವೃತ್ತಿಯಂತೆ. ಈ ವೃತ್ತಿಯನ್ನು ಹಿಡಿದು ಎಷ್ಟೋ ಊರುಗಳನ್ನು ತಿರುಗಿ, ದೇಶದಲ್ಲಿರುವ ಧನಿಕರು ದಾರಿದ್ರ್ಯವನ್ನು ಹೇಗೆ ಸೃಷ್ಟಿಸುತ್ತಾರೆಂಬುದನ್ನು ಸ್ಪಷ್ಟವಾಗಿ ತಿಳಿದನು. ಆಗಿನಿಂದಲೂ ಅವನು ಧನಿಕರ ಮನೆಗಳಿಂದ ಕದ್ದುಕೊಂಡು, ಕದ್ದ ಧನವನ್ನು ಬಡ ಪ್ರಜೆಗಳಿಗೆ ಹಂಚಿಕೊಡಲು ಪ್ರಾರಂಭಿಸಿದನು. ಇದು ಸಾಧಾರಣ ಜನರಿಗೆ ಸಂತಸದ ವಿಷಯವಾಯಿತು.

ಹೀಗೆ ಮಾಡುವುದರಿಂದ ಸುಚೋರನನ್ನು ಸಾಮಾನ್ಯ ಪ್ರಜೆಗಳು ಮೆಚ್ಚುತ್ತ ಅಭಿಮಾನಿಸಿಕೊಂಡಿದ್ದರು. ಧನಿಕರಿಗೆ ಮಾತ್ರ ಸುಚೋರನ ಭಯವಲ್ಲದೆ ಬಡಜನರಿಗೆ ಅವನು ದೇವರಂಥವನು.

ಕಳ್ಳನನ್ನು ಕುರಿತು ಶ್ರೀಮಂತರು ಸುಮ್ಮನಿರಲು ಸಾಧ್ಯವಿಲ್ಲವಷ್ಟೆ? ಅಂತೆಯೇ ಸುಚೋರನನ್ನು ಕುರಿತು ರಾಜನವರೆಗೂ ಫಿರ್ಯಾದಿ ಹೋಯಿತು. ರಾಜನು ಸುಮ್ಮನಿರದೆ ಅವನನ್ನು ಹಿಡಿಯುವ ಪ್ರಯತ್ನಗಳನ್ನು ಮಾಡಿದನಾದರೂ ಅವೇನೂ ಫಲಕಾರಿಯಾಗಲಿಲ್ಲ. ಆರಿಸಲ್ಪಟ್ಟ ಚತುರ ಗೂಢಚಾರರಿಗೆ ಕೂಡಾ ಸುಚೋರನ ಜಾಡು ತಿಳಿಯಲಿಲ್ಲ. ಸುಚೋರನೆಂಬ ಹೆಸರು ಗೊತ್ತೇ ಹೊರತು ಅವನು ಯಾರು ಏನೆಂಬುದು ಮಾತ್ರ ಗೊತ್ತಾಗಲಿಲ್ಲ. ಚೋರವಿದ್ಯೆಯಲ್ಲಿ ತುಂಬಾ ಜಾಣನಾದ ಅವನನ್ನು ಕಳ್ಳತನ

ಮಾಡುವಾಗಲೇ ಹಿಡಿಯಲು ಸಾಧ್ಯವಿರಲಿಲ್ಲ. ಅವನು ಸಾಧಾರಣ ಮನುಷ್ಯರೊಳಗೇ ಬೆರೆತುಕೊಂಡಿರುತ್ತಿದ್ದನು. ಅನೇಕ ಫಿರ್ಯಾದಿಗಳು ಮೇಲಿಂದ ಮೇಲೆ ಬರುತ್ತಿರಲು, ರಾಜನ ಅನೇಕ ಪ್ರಯತ್ನಗಳೂ ವಿಫಲವಾದ ಮೇಲೆ, ಸುಚೋರನನ್ನು ಹಿಡಿದು ಕೊಟ್ಟವರಿಗೆ ಸಾವಿರ ವರಹ ಬಹುಮಾನ ನೀಡುವುದಾಗಿ ಪ್ರಕಟಪಡಿಸಿದನು.

ಆದರಿಂದೇನೂ ಪ್ರಯೋಜನ ಕಾಣಲಿಲ್ಲ. ಬಹುಮಾನದ ಮೊತ್ತವು ಸಾವಿರದಿಂದ ಹತ್ತು ಸಾವಿರ ವರಹಗಳಿಗೂ ಹೆಚ್ಚಿಸಲ್ಪಟ್ಟಿತು. ಆದರೂ ಸುಚೋರನ ಜಾಡು ಹೇಳಿದವರಿಲ್ಲ. ಮುಖ್ಯವಾಗಿ ಅವನ ವಿಷಯ ಏನು ಗೊತ್ತಾಯಿತೆಂದರೆ, ಸುಚೋರನಿಗೆ ಸಾಮಾನ್ಯ ಪ್ರಜೆಗಳಲ್ಲಿ ಒಳ್ಳೆಯ ಗೌರವವಿದೆ. ಯೆಂತಲೂ, ಕೋಟಿ ವರಹಗಳನ್ನು ಕೊಡುವೆನೆಂದರೂ ಅವನ ರಹಸ್ಯವನ್ನು ಯಾರೂ ಹೇಳಲಾರರೆಂತಲೂ ಸ್ಪಷ್ಟವಾಯಿತು. ಹಾಗಾದರೆ ಅವನನ್ನು ಹಿಡಿಯಲು ಯಾವ ಉಪಾಯವೂ ಇಲ್ಲವೆಂದೇ ಆಯಿತು. ಆಗ ರಾಜನು ಇನ್ನೊಂದು ಪಥಕವನ್ನು ಆಲೋಚಿಸಿದನು. ಸುಚೋರನ ಜಾಡು ಚಹರೆಗಳು ತಿಳಿದಿದ್ದೂ ಹೇಳಲಿಲ್ಲವೆಂಬ ಕಾರಣದಿಂದ ಕೆಲ ಮಂದಿ ಪಾಪದ ಜನರನ್ನು ಬಂಧಿಸಿ ಕಾರಾಗೃಹದಲ್ಲಿ ಇರಿಸಿದನು. ಅವರನ್ನು ಬಿಡಿಸಿಕೊಳ್ಳಲಿಕ್ಕಾದರೂ ಸುಚೋರನು ತನ್ನಂತಾನೇ ಬರಬಹುದೆಂದು ರಾಜನಿಗೊಂದು ನಂಬುಗೆ. ಈ ನಂಬುಗೆ ಕೂಡಾ ಹುಸಿಯಾಯಿತು.

ಆಗ ರಾಜನಿಗೆ ವಿಪರೀತ ಸಿಟ್ಟು ಬಂದು, ಇಬ್ಬರು ಪಾಪದವರನ್ನು ಗಲ್ಲಿಗೇರಿಸಿ, ಅವರು ಸುಚೋರನ ಅನುಚರರೆಂದೂ, ಎಷ್ಟೋ ಘೋರ ಕಾರ್ಯಗಳನ್ನು ಮಾಡಿದುದರಿಂದಲೇ ಗಲ್ಲಿಗೇರಿಸಲ್ಪಟ್ಟರೆಂದೂ, ಪ್ರಕಟಪಡಿಸಿ, ಸುಚೋರನ ಅನುಚರರೆಲ್ಲರಿಗೂ ಇದೇ ಗತಿಯಾಗುವುದೆಂದು ದೇಶದೊಳಗೆಲ್ಲಾ ಡಂಗುರ ಸಾರಿಸಿದನು.

ಈ ಡಂಗರ ಹೊರಟ ಮಾರಣೇ ದಿನ ಸುಚೋರನು ತನಗೆ ತಾನೇ ಬಂದು ರಕ್ಷಕಭಟರ ಹಿಡಿತಕ್ಕೆ



ಸಿಕ್ಕಿಕೊಂಡನು. ರಕ್ಷಕಭಟರು ಅವನನ್ನು ಒಯ್ದು, ರಾಜನ ಇದಿರಿನಲ್ಲಿ ಹಾಜರು ಪಡಿಸಿದರು.

ಅವನೇ ಸುಚೋರನೆಂಬುದನ್ನು ದೃಢಪಡಿಸಿಕೊಂಡ ಮೇಲೆ ರಾಜನು, "ಛೀ! ಎಂಥಾ ಮನುಷ್ಯ ನೀನು? ನಿನ್ನ ಕಡೆಯವರಿಬ್ಬರು ಅನ್ಯಾಯವಾಗಿ ಸತ್ತ್ರಹೊರತು ಹೊರಬೀಳಲಿಲ್ಲ ನೀನು. ಇದು ಸರಿಯೆ?" ಎಂದನು.

"ನ್ಯಾಯದ ತಾರತಮ್ಯ ತಿಳಿದಿರುವ ನೀವು ಅನ್ಯಾಯವೆಂದು ತಿಳಿದಿದ್ದೂ ಅವರಿಬ್ಬರನ್ನೂ ಗಲ್ಲಿಗೇರಿಸಿ ಕೊಂದುಬಿಟ್ಟಿರಿ. ನೀವೆಂಥಾ ರಾಜರೋ?" ಎಂದು ಸುಚೋರನು ರಾಜನನ್ನೆ ತಿರುಗಿ ಕೇಳಿದನು.

"ಕಳ್ಳನನ್ನು ಹೊರಬರಿಸಲು ಬೇರೆ ದಾರಿ ಯಾವುದೂ ಇಲ್ಲದಿರುವಾಗ ರಾಜನು ಕೆಲವು ಅನ್ಯಾಯಗಳನ್ನು ಮಾಡಲೇ ಬೇಕಾಗುತ್ತದೆ. ಅದಕ್ಕೇ ಅವರನ್ನು ಗಲ್ಲಿಗೇರಿಸಿದೆ. ದೊಡ್ಡ ಅನ್ಯಾಯವನ್ನು ಅಳಿಸಲು ಸಣ್ಣ ಅನ್ಯಾಯಗಳನ್ನು ಮಾಡಿದರೆ ಅದು ತಪ್ಪಾಗುವುದಿಲ್ಲ." ಎಂದನು ರಾಜ.

"ಕಳ್ಳನನ್ನು ಹಿಡಿಯಲು ಬೇರೆ ದಾರಿಯೇ ಇಲ್ಲದೆ ಹೋಗಲು ಕಾರಣವೇನೆಂದು ಆಲೋಚಿಸಿದಿರಾ?" ಎಂದು ಸುಚೋರನು ಪುನಃ ಕೇಳಿದನು.

"ನಿನ್ನ ಹತ್ತಿರ ಊರವರಿಂದ ದೋಚಿಕೊಂಡ ಹಣವಿದೆ. ಪ್ರಜೆಗಳಿಗೆಲ್ಲ ಲಂಚಕೊಟ್ಟು ಎಲ್ಲರನ್ನೂ ವಶಪಡಿಸಿಕೊಂಡಿರುವೆ" ಎಂದನು ರಾಜ.

"ಲಂಚ ಎಷ್ಟು ಮಂದಿಗೆ ಕೊಡಲು ಸಾಧ್ಯವಾದೀತು? ಎಷ್ಟೆಂದು ಕೊಡಲು ಸಾಧ್ಯವಾದೀತು? ಸ್ವಾರ್ಥದಿಂದ ಎಷ್ಟು ಮಂದಿಯನ್ನು ನನ್ನವರನ್ನಾಗಿ ಮಾಡಲು ಸಾಧ್ಯ? ನಾನು ಕಳ್ಳನೇ ಆಗಿರಬಹುದು. ಆದರೆ ರಾಜನು ಮಾಡ ಬೇಕಾದ ಕೆಲಸವನ್ನು ನಾನು ಮಾಡುತ್ತಾ ಇದ್ದುದರಿಂದ ಪ್ರಜೆಗಳು ನನ್ನನ್ನು ರಾಜನಿಗಿಂತ ಹೆಚ್ಚಾಗಿಯೇ ಅಭಿಮಾನಿಸುತ್ತಾರೆ. ನೀವು ಲಕ್ಷವರಹಗಳ ಆಶೆ ಹಚ್ಚಿದರೂ ಅವರು ಒಳಪಡಲಾರರು. ಲಕ್ಷ ವರಹಗಳಿಗಾಗಿ ನನ್ನಂಥವನನ್ನು ಬಿಟ್ಟು ಕೊಡುವವರಲ್ಲ ಪ್ರಜೆಗಳು. ನೀವು ಏನೂ ತಿಳಿಯದವರನ್ನು ಬಂಧಿಸಿದಾಗ



ಕೂಡಾ ಪ್ರಜೆಗಳು ನನ್ನನ್ನು ನಿಮ್ಮ ಮುಂದೆ ಬರಲು ಬಿಡಲಿಲ್ಲ. ಪಾಪದವರಿಬ್ಬರು ಬಲಿಯಾಗಿ ಹೋದರೂ ಅವರು ನನ್ನನ್ನು ಬಿಟ್ಟು ಕೊಡಲು ಒಪ್ಪಲಿಲ್ಲ. ನಾನೇ ಸಹಿಸಲಾರದೆ ನಿಮ್ಮ ಮುಂದೆ ಬಂದಿದ್ದೇನೆ. ಈಗಾದರೂ ನನ್ನನ್ನು ನೀವು ಏನೂ ಮಾಡಲು ಸಾಧ್ಯವಿಲ್ಲ. ನನ್ನ ಮೇಲೆ ಸಣ್ಣದೊಂದು ಏಟು ಬಿದ್ದರೆ ಸಾಕು, ಅಖಂಡ ಪ್ರಜಾವಾಹಿನಿ ನಿಮ್ಮನ್ನು ಮುಳುಗಿಸಿ ಹಾಕುವುದು ಖಂಡಿತ." ಎಂದನು ಸುಚೋರ.

ಅವನ ಮಾತು ನಿಜವೇ ಎಂಬಂತೆ, ಸುಚೋರನನ್ನು ಬಿಡಬೇಕೆಂದು ನಿನಾದ ಮಾಡುತ್ತ ಲಕ್ಷ ಸಂಖ್ಯೆಯ ಪ್ರಜೆಗಳು ರಾಜಧಾನಿಗೆ ಬಂದು ಅರಮನೆಯನ್ನು ಮುತ್ತುತ್ತಿದ್ದಾರೆಂದು ಭಟರ ಮೂಲಕ ರಾಜನಿಗೆ ಗೊತ್ತಾಯಿತು.

ಆಗ ರಾಜನು ಇನ್ನಷ್ಟು ಆಶ್ಚರ್ಯ ಪಡುತ್ತ "ಹೌದು, ರಾಜನು ಮಾಡುವ ಕೆಲಸವನ್ನು ನೀನು ಮಾಡುವುದಾಗಿ ಹೇಳಿದೆ, ಅದೇನು ಕೆಲಸ? ಕಳ್ಳತನವೇ?" ಎಂದು ಗೇಲಿಯಾಗಿ ಕೇಳಿದನು.

"ಅಲ್ಲ. ರಾಜನು ಮಾಡುವ ಕೆಲಸ ಪ್ರಜೆಗಳ ಕ್ಷೇಮವನ್ನು ವಿಚಾರಿಸಿಕೊಳ್ಳುವುದು. ಅವರ ಅಗತ್ಯಗಳನ್ನು ತೀರಿಸುವುದು. ನೀವು ಆ ಕೆಲಸ ಮಾಡಲಿಲ್ಲ. ನಾನು ಮಾಡಿದೆನು. ಆದುದರಿಂದಲೇ ಸಾಧಾರಣ ಕಳ್ಳನಾಗಿದ್ದೂ ರಾಜನಿಗೆ ಕೂಡಾ ಬಾಗಿಸಲಾಗದಂಥವನಾಗಿ ನಿಂತಿದ್ದೇನೆ" ಎಂದನು ಸುಚೋರ.

"ಹಾಗಾದರೆ ಈಗ ನೀನು ಹೇಳುವುದೇನು? ನಿನಗೇನಾಗ ಬೇಕಾಗಿದೆ? ಈ ದೇಶವನ್ನೇ ಆಳಬೇಕೆಂದಿರುವೆಯೇನು?" ಎಂದು ಕೇಳಿದನು ರಾಜ.

"ಅಷ್ಟೊಂದು ಸಾಮರ್ಥ್ಯವೂ, ಅಂತಹ ಇಚ್ಛೆಯೂ ನನಗಿಲ್ಲ. ರಾಜನಿಗಿಂತ ನನ್ನಂಥ ಕಳ್ಳರೇ ಮೇಲು ಎಂದು ಪ್ರಜೆಗಳು ಅಂದುಕೊಳ್ಳುವ ವಿಧದಲ್ಲಿ ಮಾತ್ರ ರಾಜ್ಯವನ್ನು ಪಾಲಿಸಬಾರದು. ಪ್ರಜೆಗಳ ಹಿತ ಚಿಂತನೆಯನ್ನು ಮನದಂದುಕೊಂಡು ಪರಿಪಾಲನೆ ನಡೆಸಿದರೆ ನನ್ನಂಥ ಕಳ್ಳರು ಮಟ ಮಾಯವಾಗುತ್ತಾರೆ. ಇದಕ್ಕಿಂತ ಹೆಚ್ಚು ಏನೂ ಹೇಳಲಾರೆ" ಎಂದು ಹೇಳಿ ಸುಚೋರನು ಅಲ್ಲಿಂದ ಹೊರಟು ಹೋದನು.

ಕುಬೇರರಾಜನು ಅವನನ್ನು ಬಂಧಿಸುವ ಪ್ರಯತ್ನ ಮಾಡಲೇ ಇಲ್ಲ. ಪ್ರಜೆಗಳಿಗೆ ಒಬ್ಬ ಕಳ್ಳನ ಮೇಲಿರುವಷ್ಟು ದೊಡ್ಡ ಹೆಸರನ್ನೂ, ಅಭಿಮಾನವನ್ನೂ ಸಂಪಾದಿಸಲಾಗದ ತನ್ನ ಕೈಲಾಗದ ತನಕ್ಕೆ ತನ್ನೊಳಗೇ ನಾಚಿಕೊಂಡನು. ಆಗಿನಿಂದ ವಿನೋದ ವಿಲಾಸಗಳನ್ನು ಕಟ್ಟಿಟ್ಟು, ಅತ್ಯಂತ ಶ್ರದ್ಧೆಯಿಂದ ರಾಜ್ಯವನ್ನು ಪಾಲಿಸತೊಡಗಿದನು. ಇತರ ಉದ್ಯೋಗಸ್ಥರೂ ಚುರುಕುಗೊಂಡರು.





# ಪರರ ಸೊತ್ತು

ಒಂದು ಊರಿನಲ್ಲಿ ಲಚಿಮಯ್ಯನೆಂಬವನು ರಾತ್ರಿ ಭೋಜನ ತೀರಿಸಿದ ಮೇಲೆ ಹೊರಬಾಗಿಲು ಹಾಕೋಣವೆಂದು ಬಂದನು. ಆಗ ಜೋರಾಗಿ ಮಳೆಬೀಳಲು ಪ್ರಾರಂಭವಾಗಿತ್ತು. ಲಚಿಮಯ್ಯ ಹೊರಬದಿಯನಲ್ಲಿ ಒಮ್ಮೆ ನೋಡಿದಾಗ ಬೀದಿ ಬದಿಯ ಜಗಲಿಯಲ್ಲಿ ನಿಂತಿದ್ದ ಒಬ್ಬ ಮನುಷ್ಯನನ್ನು ಕಂಡನು. ಅವನು ಮಳೆಯಲ್ಲಿ ನೆನೆದು ತೊಪ್ಪೆಯಾಗಿ ಈ ಮನೆಯ ಜಗಲಿಯಲ್ಲಿ ನಿಂತು, ಮೇಲುವಸ್ತ್ರವನ್ನು ಹಿಂಡಿ ಮೈ ಒರೆಸಿಕೊಳ್ಳುತ್ತಿದ್ದನು. ಅವನ ಕಂಕುಳಲ್ಲಿ ಒಂದು ಬಟ್ಟೆಯ ಗಂಟು ಇದ್ದಿತು. ಮಿಂಚಿನ ಬೆಳಕಿನಲ್ಲಿ ಅವನ ಬಟ್ಟತಲೆಯನ್ನೂ ಬಲಗೈಯಲ್ಲಿ ಆರು ಬೆರಳುಗಳಿರುವುದನ್ನೂ ನೋಡಿ ಲಚಿಮಯ್ಯನು ಬೆರಗಾದನು.

"ತುಂಬಾ ನೆನೆದಿದ್ದೀರಲ್ಲಾ ? ಒಳಗೆ ಬಂದು ಬಟ್ಟೆ ಬದಲಾಯಿಸಿಕೊಳ್ಳಿ" ಎಂದು ಲಚಿಮಯ್ಯ ಅವನನ್ನು ಒಳಕ್ಕೆ ಕರೆದನು.

"ಕೃತಜ್ಞತೆಗಳು" ಎಂದು ಆ ಮನುಷ್ಯ ಒಳಗೆ ಬಂದನು. ಅವನ ಬಟ್ಟೆಬರೆಗಳನ್ನು ನೋಡಿದರೆ ತುಂಬ ಬಡವನಂತೆ ಕಾಣುತ್ತಿತ್ತು. ಅವನು ಒಳಗೋಣೆಯಲ್ಲಿ ಬಟ್ಟೆಬದಲಾಯಿಸಿ, ಒದ್ದೆ ಬಟ್ಟೆಯನ್ನು ಒಣಗ ಹಾಕಿದನು. ಆಗ ಅಡಿಗೆಮನೆಯೊಳಗಿನ ಕೆಲಸಗಳನ್ನು ಮುಗಿಸಿ ಹೊರಗೆ ಬಂದ ರಂಗಮ್ಮ ಅವನನ್ನು ನೋಡಿ ಕಣ್ಣರಳಿಸಿದಳು.

ಅವಳು ಗಂಡನನ್ನು ಸನ್ನೆಮಾಡಿ ಒಳಕ್ಕೆ ಕರೆದು, "ಇದೇನೂಂದ್ರೇ ! ದಾರೀಲಿ ಹೋಗುವ ದರಿದ್ರವನ್ನು ಮನೆಯೊಳಗೆ ತರುವುದುಂಟೆ ? ಅಯ್ಯ !" ಎಂದು ಗಲ್ಲ ಕೊಂಕಿಸಿದಳು.

"ದರಿದ್ರನಾದ ಮಾತ್ರಕ್ಕೆ ಮನುಷ್ಯತಾನೆ ? ಅವನು ನಮ್ಮ ಅತಿಥಿ. ಸಣ್ಣ ಅಡಿಗೆ ಪ್ರಾರಂಭಿಸು" ಎಂದ ಲಚಿಮಯ್ಯ.

"ಇದು ಇನ್ನೂ ಚೆನ್ನಾಗಿದೆ. ಒಳಗೆ ಕರೆದದ್ದು ಸಾಲದೆ ಔತಣೋಪಚಾರ ಬೇರೇನಾ ? ಅದೆಲ್ಲಾ ಸಾಧ್ಯವಿಲ್ಲ. ಮಳೆ ನಿಂತಕೂಡಲೇ ಆ ದರಿದ್ರದವನನ್ನು ಹೊರಗೆ ಕಳಿಸಿಬಿಡಿ" ಎಂದಳು ರಂಗಮ್ಮ.

ಹೆಂಡತಿಯ ಚಿರಿಪಿರಿ ಸಹಿಸಲಾರದೆ ಲಚಿಮಯ್ಯ ಬೀದಿ ಕೋಣೆಗೆ ಹೋಗಿ ಹೊರಗೆ ನೋಡಿದ. ಮಳೆ ತಗ್ಗುವ ಲಕ್ಷಣವೇನೂ ಕಾಣಲಿಲ್ಲ. ಅವನು ಮತ್ತೆ

ಎಂ. ಕೆ. ಈಶ್ವರರಾವ್



ಹೆಂಡತಿಯ ಬಳಿಗೆ ಬಂದು, "ಮಳೆ ಬಿಡುವ ಸೂಚನೆಯೇನೂ ಕಾಣುವುದಿಲ್ಲ. ಹೇಗೂ ಅವನನ್ನು ಒಳಗೆ ಕರೆದಾಯಿತು. ತಿಂಡಿಗಿಂಡಿ ಏನೂ ಬೇಡ ಬಿಡು. ಒಂದು ಚಾಪೆಯಾದರೂ ಕೊಟ್ಟುಬಿಡುವ. ಮಲಗುತ್ತಾನೆ ಪಾಪ" ಎಂದನು.

"ಹಾಗೆಲ್ಲಾ ಬೇಡ, ಕೂಡದು. ಸಿಕ್ಕಸಿಕ್ಕವರಿಗೆಲ್ಲಾ ಆಶ್ರಯಕೊಟ್ಟರೆ ಮನೇಲಿದ್ದುದನ್ನೆಲ್ಲ ಎಬ್ಬಿಸಿಕೊಂಡು ಹೋದಾರು!" ಎಂದಳು ರಂಗಮ್ಮ.

"ಆ ಮನುಷ್ಯ ಯಾರೂ ಅಂತ ಗೊತ್ತಾದರೆ ನೀನು ಹೀಗೆ ಹೇಳಲಿಕ್ಕಿಲ್ಲ." ಎಂದು ಲಚಿಮಯ್ಯ ತನ್ನ ಮದುವೆಗೆ ಮೊದಲು ನಡೆದ ಸಂಗತಿಯನ್ನು ಹೆಂಡತಿಯೊಂದಿಗೆ ಹೇಳಿದನು.

ಅದೇನೆಂದರೆ, ಲಚಿಮಯ್ಯನ ಚಿಕ್ಕತನದ ಕಾಲವೆಲ್ಲಾ ಓದುಬರೆಹಗಳೇನಿಲ್ಲದೆ, ಗಾಳಿಬೀಸುವಲ್ಲೆಲ್ಲಾ ತಿರುಗಾಡಿ ಕೊಂಡಿದ್ದನು. ಇಪ್ಪತ್ತು ವರ್ಷ ಪ್ರಾಯವಾದಾಗ ಯಾವ ಕೆಲಸಕ್ಕೂ ಉಪಯೋಗವಿಲ್ಲದವನಾದನು. ಅವನ ಸ್ನೇಹಿತರುಕೂಡಾ ಅವನ ಹಾಗಿನವರೇ ಆಗಿದ್ದರು. ಅವನಿಗೆ ಕೆಲಸ ಕೊಡುವವರು ಯಾರೂ ಇಲ್ಲದ್ದರಿಂದ, ವ್ಯಾಪಾರಮಾಡಿ ಬದುಕಬೇಕೆಂದು ತೋರಿತು. ಅದಕ್ಕಾಗಿ ಸ್ವಲ್ಪ ಹಣಬೇಕೆಂದು ತಂದೆಯನ್ನು ಕೇಳಿದನು. ತಂದೆ ಕೊಡಲಾರೆನೆಂದು ಜೋರಿನಿಂದಲೇ ಹೇಳಲು, ಒಬ್ಬ ಸ್ನೇಹಿತನ ಪ್ರೇರೇಪಣೆಯಿಂದ, ಮನೆಯೊಳಗಿನಿಂದ ಎರಡು ಸಾವಿರ ರೂಪಾಯಿಗಳನ್ನು ಕದ್ದುಕೊಂಡು ಇನ್ನೊಂದು ಊರಿಗೆ ಹೋದನು. ಅಲ್ಲಿ ಆ ಸ್ನೇಹಿತನು ಅವನಿಂದ ಏನೋ ವ್ಯಾಪಾರ ಮಾಡಿಸುವಂತೆ ನಟಿಸಿ, ಆ ಹಣವನ್ನು ವಶಪಡಿಸಿಕೊಂಡು ಲಚಿಮಯ್ಯನನ್ನು ಉಟ್ಟಬಟ್ಟೆಯಲ್ಲಿ ಬಿಟ್ಟು ಎತ್ತಲೋ ಹೋಗಿಬಿಟ್ಟನು.

ತಾನಿರುವ ಜಾಗ ತಂದೆಗೆ ಗೊತ್ತಾಗಿ ತನ್ನನ್ನು ಹುಡುಕಿಕೊಂಡು ಬರುವ ಸಂಗತಿ ಲಚಿಮಯ್ಯನಿಗೆ ಗೊತ್ತಾಯಿತು. ಕೂಡಲೇ ಅವನು ಆ ಊರನ್ನು ಬಿಟ್ಟುಹೊರಟು ಕಾಡುದಾರಿಯಲ್ಲಿ ಸಾಗಿದನು.

ಒಂದು ಗುಡ್ಡದ ಬುಡದ ಮಡುವಿನಲ್ಲಿ ಒಬ್ಬ ಮನುಷ್ಯನು ಸ್ನಾನಮಾಡಿ ಮೈ ಒರೆಸಿಕೊಳ್ಳುತ್ತಿರುವುದನ್ನು ಲಚಿಮಯ್ಯ ನೋಡಿದನು. ಅವನದು ಬಟ್ಟತಲೆ. ಬಲಗೈಗೆ ಆರು ಬೆರಳುಗಳು.

ಆ ಮನುಷ್ಯನ ಹಿಂದೆ ಒಂದು ಕಲ್ಲಿನ ಕೆಳಗೆ ಒಂದು ಪೆಟ್ಟಿಗೆ ಇದ್ದಿತು. ಲಚಿಮಯ್ಯ ಸಪ್ಪಳಿಲ್ಲದೆ ಹೋಗಿ ಆ ಪೆಟ್ಟಿಗೆಯನ್ನು ಎತ್ತಿಕೊಂಡು ತನ್ನ ದಾರಿ ಹಿಡಿದನು. ಸ್ವಲ್ಪ ದೂರ ಹೋಗಿ ಪೆಟ್ಟಿಗೆಯನ್ನು ತೆರೆದು ನೋಡಿದರೆ, ಅದರೊಳಗೆ ಅರ್ಧದಷ್ಟು ಬಂಗಾರದ ನಾಣ್ಯಗಳಿದ್ದುವು.

ಲಚಿಮಯ್ಯನಿಗೆ ಉಕ್ಕಿದ ಸಂತೋಷಕ್ಕೆ ಮೇರೆ ಇರಲಿಲ್ಲ. ಸೀದಾ ಮನೆಗೆ ಹೋಗಿ ಆ ನಾಣ್ಯಗಳನ್ನೆಲ್ಲ ತಂದೆಯ ಮುಂದೆ ಸುರಿದು, "ನೋಡಿರಿ, ನಾನು ಸಂಪಾದಿಸಿದ ಹಣ" ಎಂದನು.

"ಏನು ವ್ಯಾಪಾರ ಮಾಡಿದೆ ನೀನು ?" ಎಂದು ತಂದೆ ಅನುಮಾನದಿಂದ ಕೇಳಿದನು.

"ಅದೆಲ್ಲಾ ಕೇಳಬೇಡಿ. ನಾನು ಈ ಹಣದಿಂದ ಜವುಳೀ ಅಂಗಡಿ ತೆರೆಯುತ್ತೇನೆ." ಎಂದ ಲಚಿಮಯ್ಯ.

ಹೇಗೋ ಮಗನು ದಾರಿಗೆ ಬಂದನೆಂದುಕೊಂಡು ತಂದೆಯು ಆಶಿಸ್ಸು ದೊರೆಯಿತು. ಲಚಿಮಯ್ಯನಿಗೆ ಜವುಳೀ ವ್ಯಾಪಾರವು ಕೂಡಿ ಬಂತು. ಒಂದು ವರ್ಷ ವಾಗುವುದರೊಳಗೆ ರಂಗಮ್ಮನನ್ನು ಮದುವೆಯಾಗಿ ಮೇಲೆ ಬಂದನು.

ಈ ಸಮಾಚಾರವನ್ನೆಲ್ಲಾ ಹೆಂಡತಿಯೊಂದಿಗೆ ಹೇಳಿ, "ಈಗ ನಾವು ಅನುಭವಿಸುವ ಭೋಗಭಾಗ್ಯಗಳೆಲ್ಲಾ ಈ ಮನುಷ್ಯನ ಹಣವೇ. ಅವನು ನಮಗೆ ದೇವರು !" ಎಂದನು.

"ಆದರೇನಾಯಿತು ? ಆ ಧನವನ್ನು ಅನುಭವಿಸುವ ಪ್ರಾಪ್ತಿ ಅವನಿಗಿಲ್ಲ. ಅದನ್ನೆಲ್ಲ ನೆನೆದು ಈಗ ನೀವು ಅವನನ್ನು ಹೊರಡಿಸದಿದ್ದರೆ ಅಸಲಿಗೇ ಮೋಸ ಬರುತ್ತದೆ." ಎಂದಳು ರಂಗಮ್ಮ ಪಟ್ಟುಬಿಡದೆ.

ಆದರೆ ಲಚಿಮಯ್ಯನಿಗೆ ಅಷ್ಟೊಂದು ಜಡಿಮಳೆಯಲ್ಲಿ ಅವನನ್ನು ಹೋಗೆಂದು ಹೇಳಲು ಬಾಯಿ ಬರಲಿಲ್ಲ. ಅವನಿಗೆ ಮಲಗಲು ಒಂದು ಚಾಪೆಯನ್ನು ಕೊಟ್ಟನು. ಆ ಮೇಲೆ ಅದೂ ಇದೂ ಮಾತಾಡುವಾಗ ಅವನ ಹೆಸರು ರಾಮಯ್ಯನೆಂದು ತಿಳಿಯಿತು. ಅವನು ಒಂದು ಅಂಗಡಿಯಲ್ಲಿ ಗುಮಾಸ್ತನಾಗಿರುವನೆಂದೂ ಗೊತ್ತಾಯಿತು.

ಅತಿಥಿಯನ್ನು ತನ್ನ ಹಟದಂತೆ ಹೊರಗೆ ಹಾಕದೆ ಚಾಪೆಕೊಟ್ಟು ಉಪಚರಿಸಿದ್ದನ್ನು ನೋಡಿ ರಂಗಮ್ಮ ಗಂಡನ ಮೇಲೆ ಬಾಯಿ ತುಂಬ ಬೈಗಳನ್ನು ಗುಣುಗುಣಿಸುತ್ತ ಮಲಗಿ ನಿದ್ದೆ ಮಾಡಿದಳು. ಆದರೆ ಲಚಿಮಯ್ಯನಿಗೆ ನಿದ್ದೆ ಬರಲಿಲ್ಲ. ರಾಮಯ್ಯ ತುಂಬಾ ದರಿದ್ರಾವಸ್ಥೆಯಲ್ಲಿದ್ದಾನೆ. ಅವನಿಗೆ ತಾನು ಏನಾದರೂ ಸಹಾಯ ಮಾಡಲೇ ಬೇಕು.



ಬಹಳ ಆಲೋಚನೆ ಮಾಡಿದ ಮೇಲೆ ಲಚಿಮಯ್ಯ ಐದು ಸಾವಿರ ರೂಪಾಯಿಗಳನ್ನು ಮೂಟೆಕಟ್ಟಿ, ರಹಸ್ಯವಾಗಿ ಅದನ್ನು ರಾಮಯ್ಯನ ಬಟ್ಟೆಯ ಮೂಟೆಯೊಳಗಿಟ್ಟು ಅನಂತರ ನಿಶ್ಚಿಂತೆಯಿಂದ ನಿದ್ದೆ ಮಾಡಿದನು.

ಬೆಳಗಾಯಿತು. ರಾಮಯ್ಯ ಎದ್ದು ತನ್ನ ಮೂಟೆ ಎತ್ತಿಕೊಂಡು, ಲಚಿಮಯ್ಯನಿಗೆ ಕೃತಜ್ಞತೆ ಹೇಳಿ ತನ್ನ ದಾರಿ ಹಿಡಿದು ಹೊರಟುಹೋದನು. ಆದರೆ ಮಧ್ಯಾಹ್ನದ ಹೊತ್ತಿನಲ್ಲಿ ಅವನು ಮತ್ತೆ ಲಚಿಮಯ್ಯನ ಬಳಿಗೆ ಬಂದು, "ಇದು ನನ್ನ ಬಟ್ಟೆಗಳ ಮೂಟೆಯೊಳಗೆ ಹೇಗೆ ಬಂತೋ ಗೊತ್ತಾಗಲಿಲ್ಲ. ಯಾಕೆ ಬಂದಿತೋ ಏನು ಕಥೆಯೋ? ಇದು ನಿಮ್ಮ ಮನೆಯಲ್ಲಿಯೇ ನನ್ನ ಮೂಟೆಗೆ ಸೇರಿದೆ. ಆದ್ದರಿಂದ ಇದನ್ನು ನೀವೇ ತೆಗೆದುಕೊಳ್ಳಿ" ಎಂದು ಲಚಿಮಯ್ಯ ನಿಟ್ಟ ಹಣದ ಮೂಟೆಯನ್ನು ಲಚಿಮಯ್ಯನ ಕೈಗೆ ಕೊಟ್ಟನು.

ಅವನ ಪ್ರಾಮಾಣಿಕತೆಯನ್ನು ನೋಡಿ ಲಚಿಮಯ್ಯನ ಕಣ್ಣುಗಳು ತುಂಬಿಕೊಂಡುವು. ಇಂಥವನ ಧನವನ್ನು ತಾನು ಕದ್ದೆನಲ್ಲ! ಎಂಥ ಪಾಪಿ ತಾನು!

"ನಾನೇ ನಿಮ್ಮ ಮೂಟೆಯೊಳಗಿಟ್ಟೆನು. ನಿಮ್ಮ ಪರಿಸ್ಥಿತಿ ಏನೂ ಚೆನ್ನಾಗಿರುವಂತೆ ಕಾಣಲಿಲ್ಲ. ಈ ಹಣ ನಿಮಗೇ. ನೀವೇ ಇಟ್ಟುಕೊಳ್ಳಿ" ಎಂದನು ಲಚಿಮಯ್ಯ.

ರಾಮಯ್ಯ ನಸುವಾಗಿ ನಕ್ಕು, "ಇನ್ನೊಬ್ಬರ ಸೊತ್ತು ಎಂಬುದು ನನ್ನ ಈ ಆರನೇ ಬೆರಳು ಇದ್ದ ಹಾಗೆ, ಯಾವುದಕ್ಕೂ ಉಪಯೋಗವಿಲ್ಲ. ಅದನ್ನು ತಿಂದರೆ ಜೀರ್ಣವಾಗದು. ಆದರಿಂದ ಕೊಂಡುಕೊಂಡ ಮನೆಯಿಂದ ಏನೂ ಸುಖವಾಗದು. ಬಟ್ಟೆ ಬರೆ ಕೊಂಡುಕೊಂಡರೆ ಅದಕ್ಕೂ ಚಂದಬಾರದು. ಅಂಥಾದ್ದು ನನಗೆ ಬೇಡವೇ ಬೇಡ. ನನ್ನ ಕಷ್ಟಾರ್ಜಿತವೇ ನನಗೆ ಸಾಕು" ಎಂದನು.

ಇದನ್ನು ಕೇಳಿದ ಮೇಲೆ ಲಚಿಮಯ್ಯನಿಗೆ ತಡೆದುಕೊಳ್ಳಲಾಗಲಿಲ್ಲ. ತಾನು ಹಿಂದೆ ಪೆಟ್ಟಿಗೆ ಕದ್ದುಕೊಂಡು ಹೋದ ಕಥೆಯನ್ನೆಲ್ಲಾ ಅವನಿಗೆ ಹೇಳಿ, "ನನ್ನನ್ನು ನೀವು ಕ್ಷಮಿಸಬೇಕು. ನನ್ನ ಸಂಪತ್ತೆಲ್ಲವೂ ನಿಮ್ಮದೇ. ಆದ್ದರಿಂದ ಇದು ನಿಮಗೆ ಪರರ ಸೊತ್ತು ಅಲ್ಲವೇ ಅಲ್ಲ!" ಎಂದನು. ರಾಮಯ್ಯ ಸ್ವಲ್ಪ ಆಶ್ಚರ್ಯ ಪಡುತ್ತ, "ಆ ದಿಸ ಆ ಗುಡ್ಡದ ಬುಡದಲ್ಲಿ ಸ್ನಾನಮಾಡಿದವನು ನಾನೇ. ಆದರೆ ಆ ಪೆಟ್ಟಿಗೆ ನನ್ನದು ಅಲ್ಲವೇ ಅಲ್ಲ. ಅಸಲು ನಾನು ಆ ಪೆಟ್ಟಿಗೆಯನ್ನು ನೋಡಲೂ ಇಲ್ಲ. ಬಹುಶಃ ಆ ಪೆಟ್ಟಿಗೆಯ ಒಡೆಯನನ್ನು ಯಾವ ಹುಲಿಯೋ ಎಳೆದುಕೊಂಡು ಹೋಗಿರಬೇಕು. ಅಲ್ಲಿ ಬಿದ್ದಿದ್ದ ಪೆಟ್ಟಿಗೆ ನಿಮಗೆ ದೊರಕಿದೆ. ಸರಿ, ನಾನು ಹೊರಡುತ್ತೇನೆ. ಬಹಳ ದೂರ ಹೋಗಬೇಕು" ಎಂದು ಹೇಳಿ ಹೊರಟುಹೋದನು.

ರಾಮಯ್ಯನ ಮಾತುಗಳು ಲಚಿಮಯ್ಯನ ಕಿವಿಯೊಳಗೆ ಮೊಳಗಿಕೊಂಡೇ ಇದ್ದುವು. ರಾಮಯ್ಯನ ಮಾತುಗಳಲ್ಲಿ ನಿಜವಿರುವಂತೆಯೇ ಅವನಿಗೆ ತೋರುತ್ತಿತ್ತು. ಮನೆಯಲ್ಲಿ ಅವನಿಗೆ ಸುಖ ಶಾಂತಿ ಇಲ್ಲ. ತಿನ್ನುವುದೂ ಯಾವುದೂ ರುಚಿಸುವುದಿಲ್ಲ. ಅಜೀರ್ಣ ರೋಗವೂ ತನಗಿದೆ. ತನ್ನ ಶರೀರವು ಸ್ಥೂಲವಾಗಿ ವಿಕಾರವಾಗಿರುವುದೂ ನಿಜವೇ!

ಆ ಸಮಯಕ್ಕೆ ರಂಗಮ್ಮ ಮನೆಯಲ್ಲಿಲ್ಲದಿದ್ದುದು ಒಳ್ಳೆಯದಾಯಿತು. ಲಚಿಮಯ್ಯನು ಅಟ್ಟದ ಮೇಲಿನಿಂದ ತನಗೆ ಸಿಕ್ಕಿದ ಆ ಪೆಟ್ಟಿಗೆಯನ್ನು ಕೆಳಗೆ ತಂದು, ಅದರಲ್ಲಿ ಬಂಗಾರದ ನಾಣ್ಯಗಳನ್ನು ತುಂಬಿಸಿ ತೆಗೆದುಕೊಂಡು ಹೋಗಿ ಗ್ರಾಮಾಧಿಕಾರಿಗೆ ಕೊಟ್ಟು "ಇದನ್ನು ಊರ ಜನರ ಸೌಕರ್ಯಗಳಿಗೆ ವಿನಿಯೋಗಿಸಿರಿ" ಎಂದು ಹೇಳಿ ಮನೆಗೆ ಹಿಂದಿರುಗಿದನು.





# ಸಫಲಯಾತ್ರೆ

ಒಂದಾನೊಂದು ಕಾಲದಲ್ಲಿ ಬಹ್ಮದತ್ತನು ಕಾಶೀ ರಾಜ್ಯವನ್ನು ಆಳಿಕೊಂಡಿದ್ದಾಗ ಬೋಧಿಸತ್ವನು ಒಬ್ಬ ವರ್ತಕನ ಕುಟುಂಬದಲ್ಲಿ ಜನ್ಮಿಸಿದನು. ದೊಡ್ಡವನಾದ ಮೇಲೆ ಅವನು ಐನೂರು ಗಾಡಿಗಳಲ್ಲಿ ಸರಕುಗಳನ್ನು ಹಾಕಿಸಿಕೊಂಡು ಪೂರ್ವದಿಂದ ಪಶ್ಚಿಮಕ್ಕೂ, ಪಶ್ಚಿಮದಿಂದ ಪೂರ್ವಕ್ಕೂ ಹೋಗಿ ವರ್ತಕ ವ್ಯಾಪಾರಗಳನ್ನು ನಡೆಸಿಕೊಂಡಿದ್ದನು.

ಅದೇ ಕಾಶೀನಗರದಲ್ಲಿ ಮಂದಮತಿಯಾದ ಮತ್ತೊಬ್ಬ ವರ್ತಕನಿದ್ದನು. ಅವನಿಗೆ ವಕ್ರಮಾರ್ಗಗಳೂ ಉಪಾಯಗಳೂ ಗೊತ್ತಿರಲಿಲ್ಲ. ಒಂದು ಸಾರಿ ಬೋಧಿಸತ್ವನು ತನ್ನ ಗಾಡಿಗಳ್ಳಲ್ಲಿ ವ್ಯಾಪಾರದ ಸರಕುಗಳನ್ನು ಹಾಕಿಕೊಂಡು ಪ್ರಯಾಣಕ್ಕೆ ಸಿದ್ಧನಾಗಿರುವುದನ್ನು ನೋಡಿ ಮಂದಮತಿ ವರ್ತಕನು ತಾನು ಕೂಡಾ ಅದೇ ಸಮಯದಲ್ಲಿ ಹೊರುಡುವುದಾಗಿ ಹೇಳಿದನು.

ಆಗ ಬೋಧಿಸತ್ವನು ಮಂದಮತಿಯೊಂದಿಗೆ, "ನಿಮ್ಮ ಗಾಡಿಗಳೂ ನನ್ನ ಗಾಡಿಗಳೂ ಒಂದೇ ಸಾರಿ ಹೊರಟ ಪಕ್ಷದಲ್ಲಿ ದಾರಿ ಇಕ್ಕಟ್ಟಾಗಿ ಪ್ರಯಾಣಕ್ಕೆ ತೊಂದರೆ ಬರುತ್ತದೆ. ಆದುದರಿಂದ ಒಬ್ಬರ ಹಿಂದೆ ಒಬ್ಬರು ಹೊರಡುವುದೇ ಒಳ್ಳೆಯ ಕ್ರಮ. ಮೊದಲು ನೀವಾದರೂ ಹೊರಡಿರಿ. ಅಥವಾ ನಾನಾದರೂ ಹೊರಡುತ್ತೇನೆ. ನಿಮ್ಮ ಇಷ್ಟ ಹೇಗೋ ಹಾಗೇ ಮಾಡೋಣ" ಎಂದನು.

ಆ ಮಾತು ಕೇಳಿ ಮಂದಮತಿ ತನ್ನ ಮನಸ್ಸಿನಲ್ಲಿ ಹೀಗಂದುಕೊಂಡನು: "ಮೊದಲು ನಾನೇ ಹೊರಡುವುದು ಒಳ್ಳೆಯದು. ಅದರಿಂದ ಬಹಳ ಲಾಭಗಳಿವೆ. ದಾರಿ ಸವೆಯುವುದು ಮೊದಲಿನವನಿಂದಲೇ ಆದುದರಿಂದ ನನ್ನ ದಾರಿ ಸವೆದಿರುವುದಿಲ್ಲ. ಪಶುಗಳಿಗೆ ಒಳ್ಳೆಯ ಹುಲ್ಲೂ ಮನುಷ್ಯರಿಗೆ ಒಳ್ಳೆಯ ಪಲ್ಯ ಸೊಪ್ಪುಗಳೂ ಮೊದಲಿನವನಿಗೇ ಸಿಗುತ್ತವೆ. ನಿರ್ಮಲವಾದ ನೀರೂ ಲಭ್ಯವಾಗುತ್ತದೆ. ಸರಕುಗಳ ಬೆಲೆಯನ್ನು ಇನ್ನೊಬ್ಬರ ಹಂಗಿಲ್ಲದೆ ನನ್ನ ಇಷ್ಟ ಪ್ರಕಾರ ನಿರ್ಣಯಿಸಬಹುದು"

ಅದೇ ಸಮಯದಲ್ಲಿ ಬೋಧಿಸತ್ವನು ತನ್ನ ಮನಸ್ಸಿನಲ್ಲಿ ಹೀಗಂದುಕೊಂಡನು:

"ಒಬ್ಬರು ತುಳಿದ ದಾರಿಯಲ್ಲಿ ಪ್ರಯಾಣ ಮಾಡುವುದು ಹಿಂದಿನವರಿಗೆ ಸುಲಭ. ಒಂದು ಸಾರಿ ಪಶುಗಳು ಮೇದ ಸ್ಥಳದಲ್ಲಿ ಮತ್ತೆ ಚಿಗುರೊಡೆ



ಯುವಾಗ ಇಮ್ಮಡಿಯಾಗಿ ಹೊರಡುತ್ತದೆ. ಪಲ್ಯ ಸೊಪ್ಪುಗಳೂ ಹಾಗೇನೇ. ಮೊದಲು ಹೋದವರು ಕಷ್ಟಪಟ್ಟು ನೀರಿರುವ ಜಾಗ ಕಂಡು ಹಿಡಿಯುತ್ತಾರೆ. ಅಥವಾ ನೀರಿಗಾಗಿ ಬಾವಿ ತೋಡುತ್ತಾರೆ. ಅವು ಹಿಂದೆ ಬರುವವರಿಗೆ ಉಪಯೋಗವಾಗುತ್ತವೆ. ಹೊಸ ಸ್ಥಳಕ್ಕೆ ಮೊದಲನೇ ಸಾರಿ ಹೋಗಿ ಬೆಲೆಯನ್ನು ಕುರಿತು ಚೌಕಾಸಿ ಮಾಡುವುದು ಅಷ್ಟು ಒಳ್ಳೆಯದಲ್ಲ, ಮೊದಲು ಹೋದವರು ನಿರ್ಣಯಿಸಿದ ಬೆಲೆಯಲ್ಲಿ, ಆ ಮೇಲೆ ಹೋದವರು ಒಳ್ಳೆಯ ವ್ಯಾಪಾರವನ್ನು ಸುಲಭವಾಗಿ ಮಾಡಬಹುದು."

ಆಲೋಚನೆ ಮಾಡಿಕೊಂಡ ಮೇಲೆ ಮಂದಮತಿ ವರ್ತಕನು ಮೊದಲು ತಾನೇ ಹೊರಡುವುದಾಗಿ ಹೇಳಿದನು. ಬೋಧಿಸತ್ವನು ಸಂತೋಷದಿಂದ ಒಪ್ಪಿದನು.

ಮಂದಮತಿ ಹೋಗ ಬೇಕಾದಲ್ಲಿಗೆ ಅರುವತ್ತು ಯೋಜನಗಳಿದ್ದುವು. ಮಧ್ಯದಲ್ಲಿ ದೊಡ್ಡ ಮರಳು ಗಾಡೂ ಇದ್ದಿತು. ಆದುದರಿಂದ ಪ್ರಯಾಣಕಾಲದಲ್ಲಿ ಅಗತ್ಯವಾದ ತಿಂಡಿಗಳನ್ನೂ, ಪೀಪಾಯಿಗಳಲ್ಲಿ ಕುಡಿಯಲು ಬೇಕಾದಷ್ಟು ನೀರನ್ನೂ ಸಿದ್ಧಪಡಿಸಿಕೊಂಡ ಮಂದಮತಿ ಬೋಧೀಸತ್ವನಿಗೆ ಒಳ್ಳೆಯ ಟೋಪೀ ಹಾಕಿದೆನೆಂದುಕೊಂಡು ಹೊರಟನು.

ಮಂದಮತಿ ತನ್ನ ಸರಕಿನ ಗಾಡಿಗಳೊಂದಿಗೆ, ಪರಿವಾರದೊಂದಿಗೆ ಬಹಳದೂರ ಪ್ರಯಾಣ ಮಾಡಿ ಮರಳು ಗಾಡನ್ನು ತಲಪಿದನು. ಗಾಡಿ ಸಾಗಲು ಮಾಡಲ್ಪಟ್ಟ ದಾರಿಯಲ್ಲಿ ಸ್ವಲ್ಪ ದೂರ ಹೋಗುವಾಗ ಮಂದಮತಿಗೆ ಒಂದು ಅಪೂರ್ವವಾದ ವಾಹನವು ಇದಿರಾಗಿ ಬಂದಿತು. ಅದಕ್ಕೆ ಉತ್ತಮ ಜಾತಿಯ ಎರಡು ಬಿಳೀ ಬಣ್ಣದ ಎತ್ತುಗಳನ್ನು ಕಟ್ಟಿದ್ದರು. ಅದರಲ್ಲಿ ಒಬ್ಬ ರಾಜ ಪುರುಷನಿದ್ದನು. ಆ ಗಾಡಿಯ ಮುಂದಿನಿಂದ ಸೇವಕರು ಕತ್ತಿ, ಕಠಾರಿ, ಬಿಲ್ಲು ಬಾಣಗಳಿಂದ ಸಜ್ಜಾಗಿ ನಡೆಯುತ್ತಿದ್ದರು. ಗಾಡಿಯ ಚಕ್ರಗಳಿಗೆ ಒದ್ದೊದ್ದೆಯಾದ ಕೆಸರು ಅಂಟಿಕೊಂಡಿತ್ತು. ಎಲ್ಲರೂ ತಲೆಗಳಲ್ಲಿ ತಾಮರೆಯ ದಂಟುಗಳನ್ನು ಸುತ್ತಿಕೊಂಡಿದ್ದರು. ಅವರ ಕೈಗಳಲ್ಲಿ ಕೂಡ ತಾಮರೆ ಹೂಗಳಿದ್ದುವು.

ರಾಜ ಪುರುಷನು ಮಂದಮತಿಯೊಂದಿಗೆ "ಆಹ! ಏನುಮಳೆ! ಕುಂಭ ವರ್ಷದಂತೆ ಜಿರಿ ಜಿರಿ! ನೀರೇ ನೀರು! ಅಗೋ, ಅಲ್ಲಿ ನೋಡಿ! ಪೂರಾ ಜಲಮಯ! ನದಿ ಕೆರೆ ಊರುಗಳೆಲ್ಲಾ ಒಂದಾಗಿ ಹೋಗಿವೆ. ನೀವು ಆ ಕಡೆಗೆ ತಾನೇ ಹೋಗುತ್ತೀರಿ? ಈ ಪೀಪಾಯಿಗಳಲ್ಲಿ ಹಳೇ ನೀರೇನು ನಾಚಿಗ್ಗೇಡು! ಏಕೆ ಹೇಳಿ ಈ ಭಾರ? ನೀರು ಚೆಲ್ಲಿ ಹಗುರಾಗಿ ಹೋಗಿ, ಅಲ್ಲಿ ಬೇಕಾದಷ್ಟು ಹೊಸ ನೀರು ತುಂಬಿಕೊಳ್ಳಬಹುದಲ್ಲ?" ಎಂದು ಶುಭ ಸಮಾಚಾರವನ್ನೂ ಸಲಹೆಯನ್ನೂ ಹೇಳಿದನು.

ನಿಜಕ್ಕೂ ಆ ರಥದಲ್ಲಿದ್ದವನೂ, ಅವನ ಪರಿವಾರವೂ ನರಭಕ್ಷಕರಾದ ಯಕ್ಷರು. ಅವರು ಮರು

ಭೂಮಿಯ ಪ್ರಯಾಣಿಕರಿಗೆ ಇಂತಹ ಭ್ರಮೆಯನ್ನು ತೋರಿಸಿ ವಂಚಿಸಿ, ಅವರು ದಾಹದಿಂದಲೂ ಹಸಿವೆಯಿಂದಲೂ ಸತ್ತುಬಿದ್ದ ಮೇಲೆ ಅವರನ್ನು ಕಿತ್ತು ಕಿತ್ತು ತಿನ್ನುತ್ತಾರೆ.

ಈ ಸಂಗತಿ ತಿಳಿಯದೆ ಸ್ವಾರ್ಥ ಚಿಂತನೆಯೊಂದೇ ಬಲ್ಲ ಮಂದಮತಿ ತನ್ನ ಗಾಡಿಗಳಲ್ಲಿದ್ದ ಪೀಪಾಯಿಗಳನ್ನು ಖಾಲಿ ಮಾಡಿಸಿ ಮುಂದಕ್ಕೆ ಸಾಗಿದನು. ದೂರದಲ್ಲಿ ರಾಜಪುರುಷನು ತೋರಿಸಿದಲ್ಲಿ ನೀರಿರುವ ಹಾಗೆ ಕಾಣುತ್ತಿತ್ತೇ ಹೊರತು ಎಷ್ಟು ದೂರ ಹೋದರೂ ಅದು ಅಷ್ಟೇ ದೂರದಲ್ಲಿರುವಂತೆ ಕಾಣುತಿತ್ತು! ನಡೆದಷ್ಟೂ ಭಣಭಣಿಸುವ ಮರಳು ಗಾಡೇ ಆದುದರಿಂದ, ಎಲ್ಲರೂ ಬಾಯಾರಿಕೆಯಿಂದ ಹಾಹಾಕಾರಮಾಡ ತೊಡಗಿದರು. ಎಲ್ಲಿಯೂ ನೀರಿನ ಚುಕ್ಕೆ ಕೂಡಾ ಇಲ್ಲ. ಗಂಟಲು ಒಣಗಿ ಹೋಗಿ ಒಬ್ಬೊಬ್ಬರೇ ಸತ್ತು ಸತ್ತು ಬೀಳ ತೊಡಗಿದರು. ಕ್ರಮವಾಗಿ ಎತ್ತುಗಳು ಕೂಡಾ ನೆಲಕ್ಕೊರಗಿದುವು. ಕಡೆಗೆ ಒಬ್ಬನಾದರೂ ಉಳಿಯಲಿಲ್ಲ. ಸತ್ತ ಮನುಷ್ಯರನ್ನೂ ಪಶುಗಳನ್ನೂ ಯಕ್ಷರು ತಿಂದು ಅಸ್ಥಿಪಂಜರಗಳನ್ನು ಮರು ಭೂಮಿಯಲ್ಲಿ ಬಿಟ್ಟುಬಿಟ್ಟರು.

ನಲುವತ್ತು ದಿನಗಳು ಕಳೆದ ಮೇಲೆ ಬೋಧಿಸತ್ವನು ಕೂಡಾ ತನ್ನ ವರ್ತಕ ಪರಿವಾರದವರೊಂದಿಗೆ ಹೊರಟನು. ಅವನು ಕೂಡಾ ಪ್ರಯಾಣ ಕಾಲದಲ್ಲಿ ಬೇಕಾಗುವಷ್ಟು ತಿಂಡಿ ತಿನಸು, ನೀರು ತುಂಬಿದ ಪೀಪಾಯಿಗಳನ್ನೆಲ್ಲ ಸಿದ್ಧಪಡಿಸಿಕೊಂಡೇ ಹೊರಟಿದ್ದನು. ಅವರು ಮರಳು ಗಾಡಿನ ದಾರಿಯಲ್ಲಿ ನಡೆಯುವಾಗ ಬೋಧಿಸತ್ವನು ತನ್ನ ಜನರೊಂದಿಗೆ, "ನನ್ನ ಹತ್ತಿರ ಕೇಳದೆ ಯಾರೂ ಒಂದು ಬೊಟ್ಟು ನೀರು ಕೂಡಾ ಚೆಲ್ಲಬಾರದು. ಇಂತಹ ಮರುಭೂಮಿಯಲ್ಲಿ ವಿಷ ವೃಕ್ಷಗಳೂ ಇರುತ್ತವೆ. ನನ್ನನ್ನು ಕೇಳದೆ ಹೊಸ ಬಗೆಯ ಕಾಯಿಯೋ, ಸೊಪ್ಪೋ ಯಾರೂ ತಿನ್ನ ಕೂಡದು. ಜಾಗ್ರತೆ!" ಎಂದು ಎಚ್ಚರಿಸಿದನು.

ಅವರೆಲ್ಲ ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ ರಾಜಪುರುಷನು ಇದಿರಾಗಿ ಬಂದು ಮಂದಮತಿಗೆ ಹೇಳಿದ



ಹಾಗೆಯೇ ಹೇಳಿದನು. ಅವನೊಂದಿಗೆ ಬೋಧಿಸತ್ವನು, "ನಿಮ್ಮ ದಾರಿ ಹಿಡಿದು ನೀವು ಹೋಗಿರಿ, ನಾವು ವರ್ತಕರು. ಇನ್ನೊಂದು ಕಡೆಯಲ್ಲಿ ನೀರು ಕಂಡರೆ ಹೊರತು ಇರುವ ನೀರನ್ನು ಚೆಲ್ಲಲಾರೆವು. ಆಗ ಬೇಕಾದರೆ ಭಾರ ತಗ್ಗಿಸಿಕೊಳ್ಳುತ್ತೇವೆ." ಎಂದನು.

ಯಕ್ಷನು ಹೊರಟು ಹೋದನು. ಅವನ ಮಾತನ್ನು ನಂಬಿ ಬೋಧಿಸತ್ವನ ಕೆಲಮಂದಿ ಸೇವಕರು "ನೀರು ಚೆಲ್ಲಿಬಿಡುವುದು ಒಳ್ಳೆಯದಲ್ಲವೇ? ಈಗ ಹೇಳಿದವನ ಗಾಡಿಯ ಚಕ್ರಗಳೂ ಎತ್ತುಗಳ ಕಾಲುಗಳೂ ನೆನೆದಿದ್ದುವಷ್ಟೆ?" ಎಂದರು.

ಅವರಿಗೆ ಬೋಧಿಸತ್ವನು ಹೀಗೆಂದನು: "ಈ ಪ್ರಾಂತದಲ್ಲಿ ಜಲಾಶಯವಿರುವಂತೆ ನೀವು ಎಂದಾದರೂ ಕೇಳಿದ್ದೀರಾ? ಆ ಮನುಷ್ಯ ಅಲ್ಲಿ ಕುಂಭಧಾರೆಯಾಗಿ ಮಳೆ ಬೀಳುತ್ತಿದೆ ಎಂದನಲ್ಲಾ? ತಣ್ಣಗಿನ ಗಾಳಿ ಏನಾದರೂ ಬೀಸಿತೇನು? ಆಕಾಶದಲ್ಲಿ ಎಲ್ಲಿಯಾದರೂ ಮೋಡದ ತುಣುಕು ಕಾಣುತ್ತಿದೆಯೆ? ಯಾವ ಮೂಲೆಯಲ್ಲಾದರೂ ಮಿಂಚುವಂತೆ ಕಾಣುತ್ತದೆಯೆ? ಗುಡುಗಿನ ಧ್ವನಿ ಕೇಳುತ್ತಿದೆಯೆ? ನಾವು ನಿಃಶಕ್ತರಾಗಿ ಬೀಳುವಾಗ ಅವರು ನಮ್ಮನ್ನು ಹಿಡಿದು ತಿನ್ನಲಿಕ್ಕೇ ಈ ಉಪಾಯ ಮಾಡಿದ್ದಾರೆ. ಈ ಮೊದಲು ಹೋದ ವರ್ತಕನನ್ನೂ ಅವನ ಪರಿವಾರದವರನ್ನೂ ಇವರು ತಿಂದಿರಬಹುದು. ಅವರ ಅಸ್ಥಿಪಂಜರಗಳು ದಾರಿಯಲ್ಲಿ ನಮ್ಮ ಕಣ್ಣಿಗೆ ಬೀಳಬಹುದು."

ಬೋಧಿಸತ್ವನು ಹೇಳಿದಂತೆಯೇ ಅವರು ಸ್ವಲ್ಪ ಮುಂದೆ ಹೋದಾಗ ಮಂದಮತಿ ಮೊದಲಾದವರ ಐನೂರು ಗಾಡಿಗಳೂ ಅವುಗಳಲ್ಲಿ ಕೇಳುವವರಿಲ್ಲದ ಸರಕುಗಳೂ ಕಾಣಿಸಿದುವು. ಅವುಗಳ ಸುತ್ತಲೂ ಮನುಷ್ಯರದೂ, ಎತ್ತುಗಳದೂ ಅಸ್ಥಿಪಂಜರಗಳೂ ಅಲ್ಲಲ್ಲಿ ಬಿದ್ದಿದ್ದುವು. ಅವುಗಳನ್ನು ನೋಡಿ ಎಲ್ಲರೂ ಬೆರಗಾಗಿ ಮರುಗಿದರು.

"ನೋಡಿದಿರಾ, ಆ ಮಂದಮತಿ ದೂರಾಲೋಚನೆಯಿಲ್ಲದೆ ಇರುವ ನೀರನ್ನು ಚೆಲ್ಲಿದುದರಿಂದ ಅವರೆಲ್ಲರ ಗತಿ ಏನಾಗಿ ಹೋಯಿತು!" ಎಂದನು ಬೋಧಿಸತ್ವ.

ಆ ದಿನ ಅವರೆಲ್ಲ ಆ ಪ್ರಾಂತದಲ್ಲೇ ಮಜಿಲೀ ಮಾಡಿದರು. ಮರುದಿನ ಬೆಳಿಗ್ಗೆ ಬೋಧಿಸತ್ವನು ಸತ್ತು ಹೋದ ವರ್ತಕನ ಸರಕುಗಳಲ್ಲಿ ಕೆಡದಿದ್ದುವನ್ನೂ, ಒಳ್ಳೆಯವನ್ನೂ ತನ್ನೊಂದಿಗೆ ತೆಗೆದುಕೊಂಡು, ಗಮ್ಯಸ್ಥಾನಕ್ಕೆ ಹೋಗಿ, ವ್ಯಾಪಾರ ನಡೆಸಿ, ಒಳ್ಳೆಯ ಲಾಭದೊಂದಿಗೆ ತನ್ನ ಊರಿಗೆ ಹಿಂದಿರುಗಿದನು. ಈ ಪ್ರಯಾಣದಲ್ಲಿ ಅವನಿಗೆ ಒಂದು ಪ್ರಾಣಿ ಕೂಡಾ ನಷ್ಟವಾಗಲಿಲ್ಲ.





# ಲೋಕೋತ್ತರ ಶೋಧನೆ

"ರಾಜಕುಮಾರನು ಕಷ್ಟಗಳನ್ನು ನೋಡಬಾರದು; ಕಷ್ಟಗಳನ್ನು ಕುರಿತು ಕೇಳಬಾರದು" ಎಂದು ಶುದ್ಧೋದನ ಮಹಾರಾಜನು ಆಣತಿ ಹೊರಡಿಸಿದ್ದನು. ಸಿದ್ಧಾರ್ಥನಿಗೆ ಎಲ್ಲಾ ಸುಖ ಸೌಕರ್ಯಗಳನ್ನೂ ಒದಗಿಸಿದ್ದನು. ಅವನ ವಿನೋದಕ್ಕಾಗಿ ಒಳ್ಳೆಯ ನರ್ತಕಿಯರನ್ನೂ, ಗಾಯಕರನ್ನೂ ನಿಯೋಜಿಸಿದ್ದನಂ.

ಯಶೋಧರೆಗೆ ಪುತ್ರೋದಯವಾಯಿತು. ಶುದ್ಧೋದನನು ತನ್ನ ಮಗನು ಆಗಾಗ ವೈರಾಗ್ಯ ಧೋರಣೆಯಲ್ಲಿರುವುದನ್ನು ನೋಡಿ. ಅವನ ಭವಿಷ್ಯತ್ತನ್ನು ಕುರಿತು ಹೆದರುತ್ತಿದ್ದುದರಿಂದ, ಸಿದ್ಧಾರ್ಥನ ಮಗನಿಂದಾಗಿ, ಇನ್ನು ಅವನು ಮನೆಬಿಟ್ಟು ಹೋಗಲಾರನೆಂದು ಧೈರ್ಯ ತಾಳಿದನು.





ಒಂದು ದಿನ ಸಿದ್ಧಾರ್ಥನು ತನ್ನ ತಂದೆಯ ಅನುಜ್ಞೆ ಪಡೆದು ಉದ್ಯಾನಕ್ಕೆ ಹೊರಟನು. ದಾರಿಯಲ್ಲಿ ಒಬ್ಬ ಮುದುಕನು ಬೆನ್ನು ಮುರಿದ್ಯ ನಡೆಯುವುದನ್ನು ಕಂಡನು. ಮತ್ತೊಮ್ಮೆ ಒಬ್ಬ ರೋಗಗ್ರಸ್ತನೂ. ಇನ್ನೊಮ್ಮೆ ಸತ್ತವನ ಶವವೂ ಅವನ ಕಣ್ಣಿಗೆ ಬಿದ್ದುವು. ಅಂತಹ ದೃಶ್ಯಗಳನ್ನು ಎಂದೂ ನೋಡದಿದ್ದ ಅವನಿಗೆ ಕಳವಳವಾಯಿತು.



ನಾಲ್ಕನೇ ಸಾರಿ ಅವನಿಗೆ ಕಾಣಿಸಿದ ಸನ್ಯಾಸಿ
ತುಂಬ ಶಾಂತವಾಗಿದ್ದನು. ಸಿದ್ಧಾರ್ಥನ ಸಹಚರ
ನಾದ ಚೆನ್ನನು ಸಿದ್ಧಾರ್ಥನ ಪ್ರಶ್ನೆಗಳಿಗೆ
ವಾರ್ಧಕ್ಯವೂ, ವ್ಯಾಧಿಯೂ, ಸಾವೂ ಎಲ್ಲರಿಗೂ
ಬರುವಂಥಾದ್ದೇ ಎಂದನು. ಸನ್ಯಾಸಿ ಲೋಕದ
ಬಂಧಗಳನ್ನು ಕಡಿದುಕೊಂಡು ದೇವರನ್ನು
ಹುಡುಕುತ್ತಾನೆಂದೂ ಚೆನ್ನನಿಂದ ತಿಳಿಯಿತು.

ಸಿದ್ಧಾರ್ಥನ ಮನಸ್ಸಿನಲ್ಲಿ ಆ ದೃಶ್ಯಗಳನ್ನು
ಕುರಿತು ಮಥನವು ಪ್ರಾರಂಭವಾಯಿತು.
ಮನುಷ್ಯನು ಏತಕ್ಕಾಗಿ ಕಷ್ಟಪಡುತ್ತಾನೆ?
ಲೋಕದಲ್ಲಿ ಸಂತೃಪ್ತಿ ಸಿಗುವಹಾಗಿದ್ದರೆ
ಸನ್ಯಾಸಕ್ಕೆ ಏನು ಕೆಲಸ? ಈ ಪ್ರಶ್ನೆಗಳಿಗೆ ತಕ್ಕ
ಉತ್ತರಗಳನ್ನು ತಿಳಿದುಕೊಳ್ಳಬೇಕೆಂದು
ಸಿದ್ಧಾರ್ಥನು ಒಂದು ದಿನ ರಾತ್ರಿ ಮನೆಯಿಂದ
ಹೊರಟುಹೋದನು.





ರಾಜಭವನದ ದ್ವಾರದ ಹತ್ತಿರ ಒಂದು ವಿಚಿತ್ರಾ
ಕಾರವು ಅವನಿಗೆ ತೋರಿ, "ರಾಜಕುಮಾರಾ,
ನಿನ್ನ ಕೀರ್ತಿ ದೊಡ್ಡದಾಗುತ್ತದೆ. ಸೌಖ್ಯವೂ
ನಿನಗೆ ದೊರೆಯುತ್ತದೆ. ನೀನು ರಾಜಾಧಿರಾಜ
ನಾಗುವೆ. ಹೋಗಬೇಡ!" ಎಂದು ರಹಸ್ಯ
ವಾಗಿ ಹೇಳಿತು. ಹಾಗೆ ಹೇಳಿದವನು ಅನ್ವೇಷಕ
ರನ್ನು ತಪ್ಪುದಾರಿ ಹಿಡಿಸುವವನಾದ ದುಷ್ಟ
ಶಕ್ತಿಯ ಮಾರನೇ!

ಸಿದ್ಧಾರ್ಥನು ಕುದುರೆಯ ಮೇಲೇರಿ ತನ್ನ ಅನುಚರನಾದ ಚೆನ್ನನನ್ನು ತನ್ನೊಂದಿಗೆ ಕರೆದುಕೊಂಡು ಹೋದನು. ಅರಣ್ಯಕ್ಕೆ ಹೋದ ಕೂಡಲೇ ಅವನು ಕುದುರೆಯಿಂದ ಇಳಿದು ಕುದುರೆಯನ್ನು ತೆಗೆದುಕೊಂಡು ರಾಜಭವನಕ್ಕೆ ಹೋಗುವಂತೆ ಚೆನ್ನನಿಗೆ ಹೇಳಿದನು. ಆಮೇಲೆ ಅವನು ತನ್ನ ಉದ್ದವಾದ ತಲೆಗೂದಲನ್ನು ಕತ್ತಿಯ ಒಂದೇಟಿಗೆ ಕತ್ತರಿಸಿದನು.






ಮರು ದಿನ ಬೆಳಿಗ್ಗೆ ಚೆನ್ನನು ರಾಜಕುಮಾರನ ನಿಷ್ಕ್ರಮಣವನ್ನು ಕುರಿತು ರಾಜನೊಂದಿಗೂ, ಇತರರೊಂದಿಗೂ ಹೇಳಿದನು. ಅದೇ ಸಮಯದಲ್ಲಿ ಸಿದ್ಧಾರ್ಥನು ಅರಣ್ಯದಾಚೆಯ ಕಡೆಯಲ್ಲಿ ತನ್ನ ವಸ್ತ್ರಭೂಷಣಗಳನ್ನು ಒಬ್ಬ ಭಿಕ್ಷುಕನಿಗೆ ಕೊಟ್ಟು, ಅವನದನ್ನು ತಾನು ಧರಿಸಿಕೊಂಡನು.

ಸಿದ್ಧಾರ್ಥನು ಅನೇಕ ಪ್ರದೇಶಗಳಿಗೆ ಹೋಗಿ ದೊಡ್ಡ ದೊಡ್ಡ ಜ್ಞಾನಿಗಳನ್ನು ಸಂಧಿಸಿ ಅವರಿಗೆ ತಿಳಿದುದನ್ನೆಲ್ಲಾ ಕೇಳಿ ತಿಳಿದುಕೊಂಡನು. ಆದರೆ ಸತ್ಯವನ್ನು ಸ್ವತಃ ಶೋಧಿಸಿ ತಿಳಿಯಬೇಕಾದುದೇ ಎಂದು ಅವನಿಗೆ ತೋರಿತು. ಧ್ಯಾನನಿಷ್ಠೆಗೆ ತಕ್ಕ ಸ್ಥಳವನ್ನು ಶೋಧಿಸಿದನು.





ಸಿದ್ಧಾರ್ಥನು ಉರುವೇಲ ವನದೊಳಗಿನ ಒಂದು ವಟವೃಕ್ಷದ ಕೆಳಗೆ ಕುಳಿತುಕೊಂಡು ಧ್ಯಾನನಿಷ್ಠೆಯಲ್ಲಿ ಮುಳುಗಿ ಹೋದನು. ಐದು ಮಂದಿ ಸಂಚಾರ ತಾಪಸರು ಅವನನ್ನು ನೋಡಿ ಮಹಾಪುರುಷನೆಂದು ತಿಳಿದು ಅವನಿಗೆ ಶುಶ್ರೂಷೆ ಮಾಡಿದರು. ಸಿದ್ಧಾರ್ಥನು ಆತ್ಮಾನ್ವೇಷಣೆಯಲ್ಲಿ ಆರು ವರ್ಷಗಳನ್ನು ಕಳೆದನು.

ಶರೀರವನ್ನು ತಪಿಸಿಕೊಳ್ಳುವುದರಿಂದ ತನ್ನ ಲಕ್ಷ್ಯವು ಸಿದ್ಧಿಸಲಾರದೆಂದು ಅವನಿಗೆ ತಿಳಿದು ಹೋಯಿತು. ಸುಜಾತಾ ಎಂಬ ಯುವತಿ ತನಗಾಗಿ ತಂದ ಆಹಾರವನ್ನು ಅವನು ಸ್ವೀಕರಿಸಿದನು. ಅವನಿಗೆ ನಿಷ್ಠಾಭಂಗವಾಯಿತೆಂದುಕೊಂಡು ಅವನ ಐದು ಮಂದಿ ಶಿಷ್ಯರೂ ಅವನನ್ನು ಬಿಟ್ಟು ಹೊರಟುಹೋದರು.





ಸಿದ್ಧಾರ್ಥನು ನದೀತೀರದಲ್ಲಿದ್ದ ಬೋಧಿವೃಕ್ಷದ ಕೆಳಗೆ ತನ್ನ ಜಾಗವನ್ನು ಬದಲಿಸಿಕೊಂಡನು. ಆ ದಿನ ಹುಣ್ಣಿಮೆಯ ರಾತ್ರಿ. ಅವನು ತನ್ನನ್ನು ಶಾಂತಿ ಆವರಿಸಿಕೊಂಡಂತೆ, ತನ್ನಲ್ಲಿ ದೊಡ್ಡ ಶಾಂತಿ ವಿಕಾಸವಾದಂತೆ ಭಾಸಿಸಿದನು. ಅವನಿಗೆ ಜ್ಞಾನೋದಯವಾಯಿತು. ಅವನು ಬುದ್ಧತ್ವವನ್ನು ಹೊಂದಿದನು.



# ಸಿಕ್ಕದ ಕಳ್ಳ

**ಒಂದು** ಊರಿನಲ್ಲಿ ರತ್ನನಾಭನೆಂಬ ವರ್ತಕನ ಹತ್ತಿರ ವಿಠಲನೆಂಬ ಹುಡುಗನು ಕೆಲಸಕ್ಕಿದ್ದನು. ಅವನು ಸ್ವಲ್ಪವೂ ಮೈಗಳ್ಳತನವಿಲ್ಲದೆ, ವಿಶ್ವಾಸದವನಾಗಿ ಕೆಲಸಮಾಡುತ್ತಿದ್ದನು. ಯಜಮಾನನಿಗೆ ತನ್ನ ಮೇಲೆ ಕುರುಡು ನಂಬುಗೆ ಚೆನ್ನಾಗಿ ಬಿದ್ದಿದೆಯೆಂದು ಅವನಿಗೂ ಗೊತ್ತಾಗಿತ್ತು. ಇದನ್ನು ಆಧಾರವಾಗಿಟ್ಟುಕೊಂಡು ಒಂದು ಕಳ್ಳತನ ಮಾಡಿಬಿಡಬೇಕೆಂದು ಅವನಿಗೆ ಆಕಸ್ಮಾತ್ತಾಗಿ ದುರ್ಬುದ್ಧಿ ಹುಟ್ಟಿಬಿಟ್ಟಿತು.

ಒಂದು ದಿನ ಅಂಗಡಿ ಮುಚ್ಚುವ ಸಮಯದಲ್ಲಿ ವಿಠಲನು ಹೊಸದಾಗಿ ತಯಾರಿಸಲ್ಪಟ್ಟಿದ್ದ ರತ್ನಹಾರವನ್ನು ತೆಗೆದು ತನ್ನ ದುಸ್ತಿನೊಳಗೆ ಅಡಗಿಸಿಕೊಂಡು ಮನೆಗೆ ತೆಗೆದುಕೊಂಡು ಹೋದನು.

ಮಾರಣೇ ದಿನ ಅಂಗಡಿಗೆ ಬಂದ ಕೂಡಲೇ ರತ್ನಹಾರವು ಮಾಯವಾಗಿರುವ ಸಂಗತಿಯನ್ನು ರತ್ನನಾಭನು ಗಮನಿಸಿದನು. ಆ ಹಾರವನ್ನು ಜಮೀನ್ದಾರರಿಗಾಗಿ ಪ್ರತ್ಯೇಕ ರೀತಿಯಲ್ಲಿ ಮಾಡಿಸಿದ್ದು. ಅದನ್ನು ಈ ದಿನವೇ ಕಳುಹಿಸಿ ಕೊಡಬೇಕಾಗಿತ್ತು. ಆದುದರಿಂದಲೇ ರತ್ನನಾಭನು ಅದನ್ನು ಇಟ್ಟ ಜಾಗವನ್ನು ನೋಡಿದನು. ರತ್ನಹಾರವಿಟ್ಟ ಪೆಟ್ಟಿಗೆ ಇದ್ದಿತೇ ಹೊರತು ಅದರೊಳಗೆ ಇರಬೇಕಾಗಿದ್ದ ಹಾರ ಮಾತ್ರ ಮಾಯವಾಗಿತ್ತು. ಅದರೊಳಗೆ ತಾನು ಹಾರವನ್ನು ಇಟ್ಟಿರುವುದು ಸ್ಪಷ್ಟ ನೆನಪಿರುವಾಗ, ಅದು ಅಲ್ಲಿಲ್ಲವೆಂದರೆ, ಯಾರದೋ ಕೈವಾಡವೆನ್ನಲು ಸಂದೇಹವಿರಲಿಲ್ಲ.

ರತ್ನನಾಭನು ತುಂಬ ಬೆರಗಾದನು. ತನ್ನ ಅಂಗಡಿಯಲ್ಲಿ ಕಳ್ಳತನವಾಗುವುದು ಇದೇ ಮೊದಲು. ಅಂಗಡಿಯಲ್ಲಿ ವಿಠಲನಲ್ಲದೆ ಮತ್ತಿಬ್ಬರು ಕೆಲಸಗಾರರೂ ಇದ್ದಾರೆ. ಅವರಿಬ್ಬರೂ ಎಷ್ಟೋ ವರ್ಷಗಳಿಂದ ತುಂಬ ನಂಬುಗಸ್ತರಾಗಿ ಕೆಲಸ ಮಾಡುವವರು. ನಿಜವಾಗಿ ನೋಡುವಾಗ ವಿಠಲನೇ ಇತ್ತೀಚೆಗೆ ಬಂದ ಹೊಸಬ.

ಆದರೂ ರತ್ನನಾಭನಿಗೆ ವಿಠಲನನ್ನು ಅನುಮಾನಿಸುವ ಬುದ್ಧಿಯಾಗಲಿಲ್ಲ. ಏಕೆಂದರೆ ರತ್ನನಾಭನು ವಿಠಲನನ್ನು ಸಾವಿರಕಣ್ಣುಗಳಿಂದ ಪರೀಕ್ಷಿಸಿ ನೋಡಿ, ಅವನಲ್ಲಿ ಕಳ್ಳಬುದ್ಧಿ ಸ್ವಲ್ಪವೂ ಇಲ್ಲವೆಂಬ ನಿರ್ಧಾರಕ್ಕೆ ಬಂದಿದ್ದನು. ಆದುದರಿಂದ ರತ್ನನಾಭನು ಯಾರನ್ನೂ ಅನುಮಾನಿಸಲಾಗದ ಸಂಕಟ ಪರಿಸ್ಥಿತಿಗೇ

**ಬಿ. ಎ. ರಾವ್**



ಬಿದ್ದನು. ಇನ್ನೊಬ್ಬರೊಡನೆ ಹೇಳಿ ಆ ಲೋಚನೆ ಕೇಳುವ ಇಷ್ಟ ಅವನಿಗಿರಲಿಲ್ಲ.

ಅವನಿಗೆ ಒಂದೇ ದಾರಿ ಕಂಡಿತು. ಕಳ್ಳತನವಾಗಿರುವ ಸಂಗತಿ ತನಗೆ ಗೊತ್ತಾಗಿರುವುದನ್ನು ಹೊರಗೆ ತೋರಿಸದೆ, ಅಂಗಡಿಯಲ್ಲಿ ಕೆಲಸಗಾರರಾದ ಮೂವರನ್ನೂ ಸೂಕ್ಷ್ಮವಾಗಿ ಪರೀಕ್ಷಿಸುವುದೇ ಅದು.

ಅಂಗಡಿಯಲ್ಲಿ ಕೆಲಸಮಾಡುವ ಮೂವರೂ ತಮ್ಮ ಪಾಡಿಗೆ ತಮ್ಮ ತಮ್ಮ ಕೆಲಸ ಮಾಡಿಕೊಂಡಿದ್ದರು. ಅಷ್ಟರಲ್ಲಿ ಧನಪತಿ ಎಂಬ ಇನ್ನೊಬ್ಬ ವ್ಯಾಪಾರದ ಗೆಳೆಯ ರತ್ನನಾಭನ ಅಂಗಡಿಗೆ ಬಂದು ಕುಳಿತನು. ಕುಳಿತ ಕೂಡಲೇ ರತ್ನನಾಭನನ್ನು ನೋಡಿ "ಈ ಸಂಗತಿ ಕೇಳಿದಿರಾ ರತ್ನನಾಭರೇ? ನನ್ನ ಅಂಗಡಿಯಲ್ಲಿ ಒಂದು ಕಳ್ಳತನವಾಯಿತು!" ಎಂದನು ಒಂದು ನಿಟ್ಟುಸಿರುಬಿಟ್ಟು.

"ನಿಮ್ಮ ಅಂಗಡಿಯಲ್ಲಿ ಕಳ್ಳತನವೇ? ಕಳ್ಳ ಸಿಕ್ಕಿದನೇನು?" ಎಂದು ಆಶ್ಚರ್ಯದಿಂದ ಕೇಳಿದ ರತ್ನನಾಭ.

"ಸಿಕ್ಕಿಬೀಳದೆ ಎಲ್ಲಿಗೆ ಹೋಗುತ್ತಾನೆ? ನಿನ್ನೆ ಸಾಯಂಕಾಲ ಎಂದಿಗಿಂತ ತಡವಾಗಿಯೇ ಅಂಗಡಿ ಮುಚ್ಚಿದೆ. ಬೀಗ ಹಾಕುವ ಮೊದಲು ನನ್ನ ಅಭ್ಯಾಸದಂತೆ ನಗಗಳನ್ನೆಲ್ಲಾ ನೋಡಿಕೊಳ್ಳುತ್ತಾ ಬರುವಾಗ ಒಂದು ಕಂಠ ಹಾರ ಕಾಣಲಿಲ್ಲ. ಕೂಡಲೇ ಕೆಲಸದವರನ್ನೆಲ್ಲಾ ಸೋದಾ ಮಾಡಿದೆ. ಅಷ್ಟೋ ಕಾಲದಿಂದ ನಂಬುಗಸ್ತನಾಗಿದ್ದ ರಂಗನೇ ಅದನ್ನು ತನ್ನ ಬಟ್ಟೆಯೊಳಗೆ ಅಡಗಿಸಿಟ್ಟು ಕೊಂಡಿದ್ದ. ಕಾಲ ಮಹಿಮೆ! ಅವನ ಮೇಲೆ ನನಗೆ ಎಷ್ಟು ನಂಬುಕೆಗೆ ಇತ್ತು ಗೊತ್ತೇ? ಯಾರ ಬುದ್ಧಿ ಯಾವಾಗ ಹೇಗೆ ಮಾರ್ಪಡುತ್ತೋ!" ಎಂದನು ಧನಪತಿ.

"ಮತ್ತೆ ಅವನನ್ನು ಏನು ಮಾಡಿದಿರಿ? ರಕ್ಷಕ ಭಟರಿಗೆ ಒಪ್ಪಿಸಿದಿರಿ ತಾನೇ?" ಎಂದು ರತ್ನನಾಭನು ಧನಪತಿಯನ್ನು ಕೇಳಿದನು, ತನ್ನ ಆಳುಗಳನ್ನು ಅಡ್ಡ ಗಣ್ಣಿನಲ್ಲಿ ಗಮನಿಸುತ್ತ.

"ಅಷ್ಟುದೂರ ಏತಕ್ಕೆ? ಸ್ವಲ್ಪ ದೇಹ ಶುದ್ಧಿ ಮಾಡಿಸಿ ಕಳುಹಿಸಿ ಬಿಟ್ಟೆ. ಅವನನ್ನು ದಂಡಿಸಿ ನನಗೇನಾಗಬೇಕಾಗಿದೆ? ನನ್ನ ನಗಸಿಕ್ಕಿತಲ್ಲವೆ? ನಂಬುಗೆ ಕಳೆದುಕೊಂಡ. ಅದೇ ಅವನಿಗೆ ತಕ್ಕ ಶಿಕ್ಷೆ! ಇನ್ನು ಅವನಿಗೆ ಈ ಊರಿನಲ್ಲಿ ಯಾರುತಾನೇ ಕೆಲಸ ಕೊಟ್ಟಾರು?" ಎಂದ ಧನಪತಿ.

"ಬಹಳ ತಪ್ಪು ಮಾಡಿದಿರಿ. ಅಂಥವನನ್ನು ಅಷ್ಟೊಂದು ಹಗುರಾಗಿ ಬಿಟ್ಟು ಬಿಡಬಾರದು. ರಕ್ಷಕಭಟರಿಗೆ ಒಪ್ಪಿಸಬೇಕಿತ್ತು. ನಾನಾಗಿರುತ್ತಿದ್ದರೆ ದೇಹಶುದ್ಧಿಯೊಂದಿಗೆ, ನ್ಯಾಯಾಧಿಪತಿಯಿಂದ ಶಿಕ್ಷೆ ಕೂಡಾ ಕೊಡಿಸುತ್ತಿದ್ದೆ. ಹಾಗೆ ಮಾಡದಿದ್ದರೆ ಅವರಿಗೆ ಭಯವಿರುವುದಿಲ್ಲ!" ಎಂದ ರತ್ನನಾಭ.

ಅವನು ಈ ಮಾತು ಹೇಳುತ್ತಿದ್ದಾಗಲೇ ವಿಠಲನ ಕೈಯಲ್ಲಿದ್ದ ನೀರಿನ ಹೂಜಿ ಜಾರಿ ಕೆಳಗೆ ಬಿತ್ತು. ತನ್ನ ಮಾತುಗಳಿಂದ ವಿಠಲನಲ್ಲಿ ಉಂಟಾದ ಬದಲಾವಣೆಯನ್ನು ನೋಡಿ ರತ್ನನಾಭನಿಗೆ ಮೊದಲನೇ ಸಾರಿ

ಅವನ ಮೇಲೆ ಅನುಮಾನವಾಯಿತು. ಉಳಿದ ಇಬ್ಬರಂತಲ್ಲದೆ ವಿಠಲನು ವರ್ತಕರ ಸಂಭಾಷಣೆಗಳನ್ನು ಜಾಗರೂಕತೆಯಿಂದ ಕೇಳುತ್ತಿರುವುದನ್ನೂ ರತ್ನನಾಭನು ಕಂಡುಕೊಂಡನು. ಹೀಗೆಯೇ ಸ್ವಲ್ಪ ಹೊತ್ತು ಮಾತಾಡಿದ ಮೇಲೆ ಧನಪತಿ ಹೊರಟು ಹೋದನು.

ವಿಠಲನ ಮನಸ್ಸು ತುಂಬ ತಳಮಳಿಸ ತೊಡಗಿತು. ಅವನ ಮನಸ್ಸಿನೊಳಗೆ ರಕ್ಷಕಭಟರು ಬಂದು ಬೆದರಿಸುತ್ತಿದ್ದಾರೆ. ಕಾರಾಗೃಹವು ಕಾಣುತ್ತಿತ್ತು. ಅವನ ಪ್ರತಿ ಚಲನೆಗಳೂ ಅವನಿಗೇ ಅನುಮಾನವಾಗುವಂತಿದ್ದುವು.

ಈ ಪರಿಸ್ಥಿಯನ್ನು ಬಹಳ ಹೊತ್ತು ತಾಳಿಕೊಳ್ಳಲಾಗದೆ ಅವನು ತನ್ನ ಯಜಮಾನನೊಂದಿಗೆ, "ಇವತ್ತು ಯಾಕೋ ನನಗೆ ಮೈಸರಿಯಿಲ್ಲ. ರಜಾ ಬೇಕು ಸ್ವಾಮಿ" ಎಂದನು.

ರತ್ನನಾಭನು ಆಶ್ಚರ್ಯ ನಟಿಸುತ್ತ, "ಅದೇನಾಯಿತು? ಮೈಯಲ್ಲಿ ಸರಿಯಾಗಿಲ್ಲದಿದ್ದರೆ ಕೆಲಸಕ್ಕೆ ಏಕೆ ಬಂದೆ? ಬರಲಾಗುವುದಿಲ್ಲವೆಂದು ಹೇಳಿಕಳಿಸಿದ್ದರೆ ಸಾಕಿತ್ತಲ್ಲಾ? ಬಿಸಿಲಿನಲ್ಲಿ ಬರುವುದೂ ಹೋಗುವುದೂ ಮಾಡಿದರೆ ಇನ್ನಷ್ಟು ಕೆಡುಕಲ್ಲವೆ? ಹೋಗಿ ಮೈ ಜಾಗ್ರತೆ ನೋಡಿಕೋ" ಎಂದನು.

ವಿಠಲನು ಯಾವಕಾರಣದಿಂದಲೋ ಆಸೆಗೆಬಿದ್ದು ರತ್ನಹಾರವನ್ನು ಕದ್ದನೆಂದು ಅವನ ಮುಖ ನೋಡಿದರೇ ಗೊತ್ತಾಗುತ್ತಿತ್ತು. ಆ ಸಂಗತಿ ತನಗೆ ಗೊತ್ತಾದುದನ್ನು ಅವನಿಗೆ ತಿಳಿಯ ಗೊಡದೆ ಅವನು ತಪ್ಪು ತಿದ್ದಿಕೊಳ್ಳುವಂತೆ ಮಾಡುವುದೇ ಒಳ್ಳೆಯದೆನಿಸಿತು ರತ್ನನಾಭನಿಗೆ.

"ನೋಡಪ್ಪಾ ವಿಠಲಾ, ನಿನಗೆ ಈ ದಿನ ಒಂದು ಸಮಾಚಾರ ಹೇಳೋಣವೆಂದಿದ್ದೇನೆ." ಎಂದು ರತ್ನನಾಭನು ಮಾತು ನಿಲ್ಲಿಸಿದನು.

ವಿಠಲನ ಮುಖದಲ್ಲಿ ರಕ್ತವಿಲ್ಲದಾಯಿತು. ಅವನು ಯಜಮಾನನ ಮುಖವನ್ನು ನೋಡಲಾಗದೆ ಹೋದನು.

"ಮತ್ತೇನಿಲ್ಲ. ನೀನು ಮೈಗಳ್ಳತನವೇನಿಲ್ಲದೆ ನಂಬುಗೆಯಾಗಿ ಕೆಲಸ ಮಾಡುವುದು ಮಾತ್ರವಲ್ಲ



ಮೈ ಸರಿಯಿಲ್ಲದಿದ್ದರೂ ಕೆಲಸಕ್ಕೆ ಬರುವಷ್ಟು ಶ್ರದ್ಧೆ ಬೇರೆ ಇಟ್ಟಿದ್ದೀ. ಆದಕ್ಕಾಗಿ ಸಂತೋಷದಿಂದ ನಾನು ನಿನ್ನ ಸಂಬಳವನ್ನು ಈ ದಿನದಿಂದ ಐವತ್ತು ರೂಪಾಯಿ ಹೆಚ್ಚಿಸಿ ಹಾಕಿದ್ದೇನೆ. ಸಂತೋಷವಾಗಿ ಹೋಗಿ ಹುಷಾರಾದ ಮೇಲೆ ಬಾ," ಎಂದನು ರತ್ನನಾಭ.

ವಿಠಲನು ತನ್ನ ಯಜಮಾನನನ್ನು ನಂಬಲಾಗದಂತೆ ನೋಡಿದನು. ಅವನ ಮುಖದ ಬಣ್ಣ ಬದಲಾವಣೆಯಾಗುತ್ತಿದ್ದಿತು. ಬೆಕ್ಕು ಇಲಿಯೊಂದಿಗೆ ಆಟವಾಡುವ ಹಾಗೆ ಯಜಮಾನನು ತನ್ನೊಂದಿಗೆ ಆಟ ಆಡುತ್ತಿದ್ದಾನೆಯೆ? ತಾನು ಕಳ್ಳತನ ಮಾಡಿದ್ದು ಎಂಥಾ ಬುದ್ಧಿಗೇಡಿತನವೋ! ಹೀಗೆ ನೆನೆಯುತ್ತ ಅವನು ಮೇಲೆ ಕೆಳಗೆ ನೋಡಿಕೊಂಡಿದ್ದನು.

"ಏನು, ನಾನು ಹೇಳಿದ್ದು ಅರ್ಥವಾಯಿತೆ? ಮಾತಾಡುವುದಿಲ್ಲವೇಕೆ?" ಎಂದು ರತ್ನನಾಭ ಅವನನ್ನು ಕೇಳಿದನು.

"ಅರ್ಥವಾಯಿತು ಸ್ವಾಮಿ! ಎಲ್ಲಾ ನಿಮ್ಮದಯ!" ಎಂದನು ವಿಠಲ. ಆ ಕ್ಷಣಗಳಲ್ಲಿ ಅವನನ್ನು ಕಾಪಾಡುತ್ತಿರುವುದು ಯಜಮಾನನ ದಯದ ಹೊರತು ಮತ್ತಾವುದು?

"ಸರಿ ಹೋಗು. ನಿನ್ನ ಆರೋಗ್ಯ ಸರಿಯಾದ ಮೇಲೆಯೇ ಕೆಲಸಕ್ಕೆ ಬಾ. ಅಂದ ಹಾಗೆ ಜಮೀನ್ದಾರರ ರತ್ನಹಾರ ಮೊನ್ನೆಯೇ ಕೊಡಬೇಕಿತ್ತು. ಈ ದಿನ ಅದನ್ನು ತೆಗೆದುಕೊಂಡು ಹೋಗಿ ಅವರಿಗೆ ಕೊಟ್ಟು, ಮಜೂರಿ ಹಣ ಪಡೆದುಕೊಂಡು, ನೀನು ಕೆಲಸಕ್ಕೆ ಬರುವಾಗ ತೆಗೆದುಕೊಂಡು ಬಾ." ಎಂದನು ರತ್ನನಾಭ.

ವಿಠಲನಿಗೆ ಹೋಗುವ ಪ್ರಾಣ ಮತ್ತೆ ಬಂದ ಹಾಗಾಯಿತು. ಪೆಟ್ಟಿಗೆಯಲ್ಲಿ ಹಾರವಿಲ್ಲದ ಸಂಗತಿ ಇನ್ನೂ ತನ್ನ ಯಜಮಾನನಿಗೆ ತಿಳಿದಿಲ್ಲವೆಂದು ಅವನಿಗೆ ಧೈರ್ಯ ಬಂದಿತು. ಅವನು ಯಜಮಾನನು ಕೊಟ್ಟ ಆ ಪೆಟ್ಟಿಗೆಯನ್ನು ತೆಗೆದುಕೊಂಡು ಉತ್ಸಾಹದಿಂದ ಮನೆಗೆ ಹೋದನು.

ಹೋದ ಕೂಡಲೇ ತಾನು ಕಳವು ಮಾಡಿದ ರತ್ನಹಾರವನ್ನು ಆ ಖಾಲೀ ಪೆಟ್ಟಿಗೆಯೊಳಗೆ ಹಾಕಿ, ಜಮೀನ್ದಾರರ ಮನೆಗೆ ಹೋಗಿ ಅದನ್ನು ಕೊಟ್ಟು, ಮಜೂರೀ ಹಣವನ್ನು ಪಡೆದು, ಮರುದಿನ ತನ್ನ ಯಜಮಾನನಿಗೆ ತಂದುಕೊಟ್ಟನು.

"ನಿನ್ನ ಆರೋಗ್ಯ ಸರಿಯಾಯಿತೇನೋ?" ಎಂದು ಯಜಮಾನನು ನಗುತ್ತಾ ಕೇಳಲು, ಯಜಮಾನನಿಗೆ ಎಲ್ಲಾ ಗೊತ್ತಿರುವುದೆಂದು ವಿಠಲನಿಗೆ ಗೊತ್ತಾಯಿತು. ಇನ್ನು ಮುಚ್ಚು ಮರೆಯೇಕೆ? "ನಿನ್ನೆಯೇ ಪೂರ್ತಿ ಗುಣವಾಯಿತು ಮಹಾಸ್ವಾಮಿ" ಎಂದನು ಕಳಂಕ ತೊಳೆಯಲ್ಪಟ್ಟ ವಿಠಲ.



# ಸರಿಯಾದ ನಿರ್ಣಯ

ಕೃಷ್ಣಯ್ಯನ ನೆರೆಮನೆಯವನಾದ ಹರಿದಾಸನು ಕೇವಲ ಜಗಳಗಂಟನಾಗಿದ್ದ. ಕೃಷ್ಣಯ್ಯ ನೆರೆಮನೆಯವನಾಗಿರುವ ಪಾಪಕ್ಕೆ ಪ್ರತಿಯೊಂದಕ್ಕೂ ಕಾಲು ಕೆದರಿ ಜಗಳ ಮಾಡುತ್ತಿದ್ದನು ಹರಿದಾಸ. ಕೃಷ್ಣಯ್ಯ ಎಷ್ಟೋ ಸಾತ್ವಿಕ ಗುಣದವನಾದರೂ ಸಹ ಹರಿದಾಸನ ಮೇಲೆ ಆಗಾಗ ಕೂಗಾಡಬೇಕಾಗಿ ಬಂದು, ಜಗಳವನ್ನು ಸ್ವಲ್ಪ ಕಲಿಯಲೇ ಬೇಕಾಯಿತು.

ಕೃಷ್ಣಯ್ಯನ ಮನೆಯಲ್ಲಿದ್ದ ತೆಂಗಿನಮರವು ಬೆಳೆದು, ಪೂರ್ತಿ ಹರಿದಾಸನ ಮನೆಯ ಕಡೆಗೆ ಬಾಗಿಕೊಂಡಿತ್ತು. ಆ ಕಾರಣದಿಂದ ಕೃಷ್ಣಯ್ಯನು ಹರಿದಾಸನ ವಠಾರದೊಳಗೇ ಉದುರಿಬೀಳುವ ತೆಂಗಿನಕಾಯಿಗಳನ್ನು, ಹರಿದಾಸನೇ ತೆಗೆದುಕೊಳ್ಳಲೆಂದು ಬಿಟ್ಟುಬಿಡುತ್ತಿದ್ದನು. ಆದರೆ ಹರಿದಾಸನಿಗೆ ಅದರಿಂದ ತೃಪ್ತಿಯಾಗುತ್ತಿರಲಿಲ್ಲ. ಒಂದು ಸಾರಿ ಅವನು ಕೃಷ್ಣಯ್ಯನ ತೆಂಗಿನಮರದಲ್ಲಿ ಬೆಳೆದ ತೆಂಗಿನಕಾಯಿಗಳ ಗೊನೆ ಪಕ್ವಕ್ಕೆ ಬಂದ ಕೂಡಲೇ ತಾನೇ ಕೊಯಿದುಕೊಂಡನು.

ಇದಕ್ಕೆ ಕೃಷ್ಣಯ್ಯನು ಆಭ್ಯಂತರ ಹೇಳಿದನು. ಹರಿದಾಸ ಕೃಷ್ಣಯ್ಯನ ಮೇಲೆ ಬೈಗಳ ಮಳೆಯನ್ನೇ ಸುರಿಸಿದನು. ಕೃಷ್ಣಯ್ಯ ಗ್ರಾಮಾಧಿಕಾರಿಯೊಂದಿಗೆ ಫಿರ್ಯಾದಿ ಮಾಡಿದಾಗ, ಗ್ರಾಮಾಧಿಕಾರಿ ಹರಿದಾಸನನ್ನು ಕರೆಯಿಸಿ, "ಇದೇನು ಕೆಲಸ ? ಕೃಷ್ಣಯ್ಯ ಸಸಿನೆಟ್ಟು, ನೀರೆರೆದು, ಗೊಬ್ಬರ ಹಾಕಿ ಬೆಳೆಸಿದ ತೆಂಗಿನಕಾಯಿಗಳನ್ನೆಲ್ಲ ನೀನೇ ಕೊಯ್ದುಕೊಳ್ಳುವುದು ನ್ಯಾಯವೇ ?" ಎಂದು ಕೇಳಿದನು.

"ಯಾರು ಬೆಳೆಸಿದರೇನು ? ಮರದ ತಲೆ ನನ್ನ ಪಠಾರದೊಳಗಿದೆ. ಅದರಲ್ಲಿ ಬೆಳೆದ ಕಾಯಿಗಳೂ ನನ್ನದೇ ತಾನೇ ?" ಎಂದ ಹರಿದಾಸ. ಗ್ರಾಮಾಧಿಕಾರಿ ಕೃಷ್ಣಯ್ಯನ ಕಡೆಗೆ ತಿರುಗಿ, "ಹರಿದಾಸನ ಮಾತು ತಪ್ಪು ಎನ್ನುವಂತಿಲ್ಲ. ತೆಂಗಿನಮರದ ತಲೆ ಅವನ ಆವರಣದೊಳಗಿದ್ದರೆ ಮರದ ಬುಡ ನಿನ್ನ ಆವರಣದಲ್ಲಿದೆ. ಅದರ ಕಾಯಿಗಳು ನಿನಗೆ ಹೇಗೂ ದಕ್ಕುವುದಿಲ್ಲವಾದುದರಿಂದ ಅದರ ಬುಡವನ್ನು ಕಡಿದುಬಿಡು. ಅದೇ ಒಳಿಯದು. ಮರವು ಅವನ ಹಟ್ಟಿಯ ಮೇಲೂ ಮಾಡಿನ ಮೇಲೂ ಬಿದ್ದರೆ ನಿನ್ನದೇನೂ ತಪ್ಪಿಲ್ಲವೆಂದು ನಾನು ತೀರ್ಪು ಹೇಳುತ್ತೇನೆ" ಎಂದನು.

ಕೂಡಲೇ ಹರಿದಾಸನು ತೆಂಗಿನ ಗೊನೆಯಲ್ಲಿದ್ದ ಕಾಯಿಗಳನ್ನೆಲ್ಲಾ ತಂದು ಕೃಷ್ಣಯ್ಯನಿಗೆ ಕೊಟ್ಟನು. ಅವುಗಳಿಂದ ಎರಡು ಕಾಯಿಗಳನ್ನು ಕೃಷ್ಣಯ್ಯನು ಹರಿದಾಸನಿಗೂ ಕೊಟ್ಟನು. ಅಂದಿನಿಂಥ ಹರಿದಾಸನ ಜಗಳಗಂಟತನ ಅವನನ್ನು ಬಿಟ್ಟುಹೋಯಿತು.







# ವಾನರಸಹಾಯ

ಹಿಂದೆ ಒಂದಾನೊಂದು ಪಟ್ಟಣದಲ್ಲಿ ಒಬ್ಬಳು ಬಡ ಹೆಂಗುಸಿದ್ದಳು. ಅವಳ ಗಂಡನಿರುವಾಗ ಸಂಪಾದನೆ ಮಾಡಿಕೊಂಡು, ಕೇಳಿದವರಿಗೆ ಇಲ್ಲವೆನ್ನದೆ, ಒಳ್ಳೆಯ ಹೆಸರು ಪಡೆದನೇ ಹೊರತು ಏನೂ ಸೇರಿಸಿಡದೆ, ಹೆಂಡತಿಯನ್ನೂ ಒಬ್ಬನೇ ಒಬ್ಬ ಮಗನನ್ನೂ ಪರಮ ದರಿದ್ರಾವಸ್ಥೆಯಲ್ಲಿರುವಂತೆ ಬಿಟ್ಟು ಸತ್ತು ಹೋದನು. ಅವನ ಮಗನೇ "ನಿದ್ದೇಮೋರೆ ರಂಗ" ನೆಂದರೆ.

ತಂದೆ ಸಾಯುವಾಗ ರಂಗನಿಗೆ ಹನ್ನೊಂದು ವಯಸ್ಸಾಗಿತ್ತು. ಆಗಲೇ ಅವನು ಜಡಹಿಡಿದ ಹುಡುಗ. ಕುಳಿತ ಜಾಗಬಿಟ್ಟು ಕದಲಲಿಕ್ಕೂ ಅವನಿಂದಾಗದು. ಕೇವಲ ಮಣ್ಣು ತಿಂದ ಹಾವಿನ ಹಾಗೆ ಕುಳಿತಲ್ಲೇ ತೂಕಡಿಸಿ, ಹಾಗೆಯೇ ಮಲಗಿ ನಿದ್ರಿಸಿಕೊಂಡಿರುವನು. ಅವನು ಎದ್ದು ತಿರುಗುವುದನ್ನೋ, ಏನಾದರೂ ಕೆಲಸಮಾಡುವುದನ್ನೋ ಯಾರೂ ನೋಡಿದವರಿಲ್ಲ.

"ಏನೋ ನನ್ನ ಹಣೇಬರೆಹ. ದೇವರೇ ಅವನನ್ನು ಹಾಗೆ ಸೃಷ್ಟಿಸಿದ್ದಾನೆ. ಏನು ಮಾಡೋದು ?" ಎಂದುಕೊಂಡು ರಂಗನ ತಾಯಿ ಅವನಿಗೇನೂ ಹೇಳದೆ ಬೈಯದೆ ಹೊಡೆಯದೆ ತಾನೇ ನಾಲ್ಕಾರು ಮನೆಯ ಕಸಮುಸುರೆ ಮಾಡಿ ಸಿಕ್ಕಿದ ಕೂಲಿಯಿಂದ ತನ್ನ ಹೊಟ್ಟೆಯನ್ನೂ ಮಗನ ಹೊಟ್ಟೆಯನ್ನೂ ತುಂಬಿಸಿಕೊಂಡಿದ್ದಳು. ರಂಗನು ತಾಯಿ ಎಬ್ಬಿಸಿದಾಗ ಎದ್ದು ಊಟಮಾಡಿ ಮತ್ತೆ ಮಲಗಿ ನಿದ್ರಿಸುವನು. ಹೀಗೆಯೇ ಸಾಗುತಿದ್ದುವು ದಿನಗಳು.

ರಂಗನ ಮನೆಯ ಹತ್ತಿರದಲ್ಲಿ ಒಬ್ಬ ವರ್ತಕನಿದ್ದನು. ಅವನ ಹೆಸರು ವರಾಹ ಶೆಟ್ಟಿ. ಅವನು ವರ್ತಕದ ಮೇಲೆ ಚೀನಾಕ್ಕೆ ಹೋಗುವನೆಂಬ ಸಂಗತಿ ರಂಗನ ತಾಯಿಗೆ ತಿಳಿಯಿತು. ಅವಳು ದಿನಾ ಒಂದು ಹುಂಡಿಯಲ್ಲಿ ಒಂದೊಂದು ಪಾವಲಿ ಹಾಕುತ್ತಿದ್ದಳು. ಅದೀಗ ಐದು ವರಹಗಳಷ್ಟಾಗಿದ್ದುವು. ಅವಳು ಆ ಐದು ವರಹಗಳನ್ನು ತೆಗೆದುಕೊಂಡು ರಂಗನ ಕೈಗೆ ಕೊಟ್ಟು, "ಕಂದಾ, ಇವುಗಳನ್ನು ವರಾಹ ಶೆಟ್ಟರಿಗೆ ಕೊಟ್ಟು, ತಿರುಗಿ ಬರುವಾಗ ಏನಾದರೂ ವ್ಯಾಪಾರದ ಸರಕು ತಂದು ಕೊಡಲಿಕ್ಕೆ ಹೇಳು. ಅದರಿಂದ ನೀನು ವ್ಯಾಪಾರ ಶುರುಮಾಡಿ ಕೂತಲ್ಲೇ ಬದುಕ ಬಹುದು ಮಗಾ" ಎಂದಳು. ಪಾಪ, ಅವಳಿಗೆ ರಂಗನ ಮುಂದಿನ ಆಲೋಚನೆ ಪ್ರಾರಂಭವಾಗಿತ್ತು.

**೨೫ ವರ್ಷಗಳ ಹಿಂದಿನ ಚಂದಮಾಮ ಕಥೆ**

ತಾಯಿ ಒತ್ತಾಯ ಮಾಡಿ ಹೇಳಿದ ಮೇಲೆ ರಂಗನು ತೂಕಡಿಕೆಬಿಡುತ್ತ, ಮೂಲುಗುತ್ತ, ಆಕಳಿಸಿ ಎದ್ದು, ಐದು ವರಹಗಳೊಂದಿಗೆ ನಿದ್ದೆ ಮತ್ತಿನಲ್ಲೇ ನಡೆದು ವರಾಹ ಶೆಟ್ಟಿಯ ಬಳಿಗೆ ಹೋಗಿ, ತಾಯಿ ಹೇಳಿದ ಮಾತಿನ ಚೂರುಗಳನ್ನು ಹೇಳಿ ಐದು ವರಹಗಳನ್ನು ನೀಡಿದನು.

ರಂಗನ ಮೇಲೆ ಮೊದಲೇ ವರಾಹ ಶೆಟ್ಟಿಗೆ ಕನಿಕರವಿತ್ತು. ಅವನು ಹೇಳಿದ ಮಾತು ಕೇಳಿ ಇನ್ನಷ್ಟು ಮನಗರಗಿದನು. ಅವನು ಕೊಟ್ಟ ಈ ಅಲ್ಪ ದ್ರವ್ಯದಿಂದ ರಂಗನು ವ್ಯಾಪಾರ ಮಾಡುವುದೇನನ್ನು? ಲಾಭಗಳಿಸುವುದೇನನ್ನು? ಈ ಸಂಗತಿ ತಿಳಿದಿದ್ದರೂ, ಜನ್ಮತಃ ದಯಾ ಗುಣದವನಾದ ವರಾಹ ಶೆಟ್ಟಿ "ಹಾಗೇ ಆಗಲಪ್ಪಾ" ಎಂದು ಹೇಳಿ ಐದು ವರಹಗಳನ್ನು ತೆಗೆದುಕೊಂಡನು. ರಂಗನು ಮತ್ತೆ ಮನೆಗೆ ಹಿಂದಿರುಗಿ ಹೋಗಿ ತಾಯಿಯೊಂದಿಗೆ ವರಾಹ ಶೆಟ್ಟರು ಹಣ ಪಡೆದುಕೊಂಡ ಸಂಗತಿ ಹೇಳಿ, ತನ್ನ ಜಾಗದಲ್ಲಿ ಮಲಗಿ ನಿದ್ದೆಗೆ ತೊಡಗಿದನು.

ವರಾಹ ಶೆಟ್ಟಿ ಇತರ ವರ್ತಕರೊಂದಿಗೆ ಕೂಡಿಕೊಂಡು, ಹಡಗುಗಳನ್ನು ಮಾತಾಡಿ ಒಳ್ಳೆಯ ಮುಹೂರ್ತದಲ್ಲಿ ಲಂಗರು ಎತ್ತಿಸಿ ಪ್ರಯಾಣ ಹೊರಟನು. ಅದೃಷ್ಟವಶಾತ್ ಗಾಳಿ ಅನುಕೂಲವಾಗಿತ್ತು. ಹಡಗು ನಿಂತ ರೇವುಗಳಲ್ಲೆಲ್ಲಾ ವರ್ತಕರಿಗೆ ಕ್ರಯವಿಕ್ರಯಗಳು ಚೆನ್ನಾಗಿಯೇ ನಡೆದುವು. ಕಡೆಗೆ ಅವರ ಹಡಗು ಚೀನಾದೇಶವನ್ನು ತಲಪಿತು. ಅಲ್ಲಿ ವರ್ತಕರೆಲ್ಲರೂ ತಾವು ತಂದ ಸರಕುಗಳನ್ನು ಪೂರ್ತಿಯಾಗಿ ಮಾರಿ, ಅಲ್ಲಿ ಸಿಗುವ ಚೀನಾಂಬರಗಳನ್ನೂ, ದಂತದ ಸಾಮಾನುಗಳನ್ನೂ, ಮಣಿ ರತ್ನ ಮೊದಲಾದುವನ್ನೂ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಕೊಂಡುಕೊಂಡರು. ಮತ್ತೆ ಅವರ ಹಡಗು ಹಿಂದಿರುಗಿ ಪ್ರಯಾಣ ಹೊರಟಿತು.

ಹತ್ತು ದಿನಗಳು ಕಳೆದ ಮೇಲೆ ವರಾಹ ಶೆಟ್ಟಿಗೆ ಅಕಸ್ಮಾತ್ತಾಗಿ ರಂಗನು ಕೊಟ್ಟ ಐದು ವರಹಗಳ ವಿಷಯ ನೆನಪಿಗೆ ಬಂತು. ಆದರಿಂದ ಏನಾದರೂ ಸರಕು ತಂದು ಕೊಡುವಂತೆ ರಂಗನು ಹೇಳಿದ್ದ.





ವ್ಯಾಪಾರದ ಗಡಿಬಿಡಿಯಲ್ಲಿ ವರಾಹ ಶೆಟ್ಟಿ ಆ ವಿಷಯ ಮರೆತಿದ್ದ. ಈಗ ತಾನು ಕೊಂಡುಕೊಂಡ ಸರಕುಗಳಲ್ಲಿ ಏನಾದರೂ ರಂಗನಿಗೆ ಕೊಡೋಣವೆಂದರೆ, ಅಷ್ಟೊಂದು ಅಗ್ಗದವಸ್ತು ಯಾವುದೂ ಇರಲಿಲ್ಲ.

ವರಾಹ ಶೆಟ್ಟಿ ಉಳಿದ ವರ್ತಕರೊಂದಿಗೆ, "ಹಡಗನ್ನು ಮತ್ತೆ ಚೀನಾಕ್ಕೆ ತಿರುಗಿಸಿರಿ. ನನ್ನಿಂದ ಹೀಗೊಂದು ತಪ್ಪಾಯಿತು." ಎಂದು ಆ ಸಂಗತಿಯನ್ನು ಕೂಡಾ ಹೇಳಿದನು. ಉಳಿದ ವರ್ತಕರು ಹಿಂದಿರುಗಲು ಒಪ್ಪದೆ, "ಬೇಕಾದರೆ ನಾವೆಲ್ಲಾ ತಲಾ ಇಂತಿಷ್ಟು ಚಂದಾ ಹಾಕಿ ಆ ಹುಡುಗನಿಗೆ ಕೊಡುತ್ತೇವೆ. ಹಡಗನ್ನು ಹಿಂದಿರುಗಿಸುವ ಮಾತು ಮಾತ್ರ ಬೇಡ. ಹಾಗೆ ಮಾಡುವುದು ಒಳ್ಳೆಯದಲ್ಲ; ನಮ್ಮ ಶಕುನಗಳಿಗೆ ದ್ರೋಹ ಮಾಡಿದಂತೆ !" ಎಂದರು.

ಕೆಲವು ದಿನಗಳು ಕಳೆದ ಮೇಲೆ ಪೂರ್ವ ದ್ವೀಪಗಳ ಒಂದು ರೇವನ್ನು ತಲಪಿದರು. ಆಗ ಹಡಗಿನ ಬಳಿಗೆ ಅನೇಕ ಮಂದಿ ಭಿಕ್ಷುಕರು ಬಂದರು. ಅವರಲ್ಲಿ ಒಬ್ಬನೊಂದಿಗೆ ಮೂರು ಕೋತಿಗಳಿದ್ದುವು. ಅವುಗಳಲ್ಲಿ ಎರಡು ಕೋತಿಗಳು ತುಂಬ ಚುರುಕಾಗಿದ್ದುವು. ಯಜಮಾನನು ಯಾವ ಆಟ ಹೇಳಿದರೂ ಆಡುತ್ತಿದ್ದುವು. ಮೂರನೆಯದು ಮುದಿ ಕೋತಿ. ಅದಕ್ಕೆ ಯಾವ ಆಟವೂ ಗೊತ್ತಿರುವಂತೆ ಕಾಣಲಿಲ್ಲ. ಉಳಿದ ಎರಡು ಕೋತಿಗಳು ಆಡುತ್ತಿದ್ದರೆ ಅದು ಮಾತ್ರ ದಿಗಿಲು ಮೂತಿ ಮಾಡಿಕೊಂಡು ಸಮುದ್ರದ ಕಡೆಗೆ ನೋಡುತ್ತಾ ಕುಳಿತಿತ್ತು.

ಆ ಕೋತಿಗಳ ಆಟವನ್ನು ನೋಡುತ್ತಿದ್ದಂತೆ ವರಾಹ ಶೆಟ್ಟಿಗೆ ಒಂದು ಆಲೋಚನೆ ಬಂದಿತು. ರಂಗನು ಕೊಟ್ಟ ಐದು ವರಹಗಳಿಗೆ ಒಂದು ಕೋತಿಯನ್ನು ಕೊಂಡು ಕೊಂಡು ಹೋಗಿ ಅವನಿಗೆ ಕೊಟ್ಟರೆ ತನ್ನ ಬಾಧ್ಯತೆ ತೀರಿ ಹೋಗುವುದೆಂದು ವರಾಹ ಶೆಟ್ಟಿಗೆ ತೋರಿತು. ಕೋತಿಯೊಂದಿಗೆ ಆಡಿಕೊಂಡಿದ್ದರೆ ರಂಗನ ಜಡತನವೂ ಹೋಗಬಹುದಾಗಿತ್ತು.

"ಏನಪ್ಪಾ, ಆ ಕೋತಿಗಳಲ್ಲಿ ಒಂದನ್ನು ಮಾರುವಿಯಾ? ಐದು ವರಹಾ ಕೊಡುತ್ತೇನೆ" ಎಂದನು ವರಾಹ ಶೆಟ್ಟಿ ಕೋತಿಗಳ ಯಜಮಾನನನ್ನು ನೋಡಿ.

"ಈ ಮುದಿ ಕೋತಿಯನ್ನು ಕೊಡುತ್ತೇನೆ ಸ್ವಾಮಿ. ಬೇಕಾದರೆ ತಕ್ಕೊಂಡು ಬಿಡಿ" ಎಂದ ಕೋತಿಗಳ ಒಡೆಯ.

"ಆ ಸಣ್ಣ ಕೋತಿಯೊಂದನ್ನು ಕೊಡಬಾರದೇನೋ? " ಎಂದು ಕೇಳಿದ ವರಾಹ ಶೆಟ್ಟಿ.

"ಅವುಗಳನ್ನು ನೂರು ವರಹ ಕೊಟ್ಟರೂ ಸಹ ಕೊಡಲಾರೆ. ಅವುಗಳೇ ನನ್ನ ಬದುಕು. ಈ ಮುದಿ ಮೊದ್ದನ್ನು ಐದು ವರಹಗಳಿಗೆ ಕೊಂಡುಕೊಂಡಿದ್ದೆ. ತಿಂಡಿದಂಡವೇ ಹೊರತು ಒಂದು ಆಟವೂ ಆಡದು. ಕಲಿಸಿದರೂ ಕಲಿಯದು. ಬರೀ ತಿಂಡಿದಂಡದ್ದು! ಇದನ್ನೇ ತಗೊಳ್ಳಿ ಸ್ವಾಮಿ!" ಎಂದನು ಕೋತಿಗಳ ಯಜಮಾನ. ಉಪಾಯವಿಲ್ಲದೆ ವರಾಹ ಶೆಟ್ಟಿ ಮುದಿ ಕೋತಿಯನ್ನೇ ಕೊಂಡುಕೊಂಡು

ಹಡಗನ್ನೇರಿದನು. ಆ ಕೋತಿ ಕೂಡಾ ರಂಗನ ಹಾಗೆಯೇ ಇರುವಂತೆ ಕಂಡಿತು. ಅದಕ್ಕೆ ಸ್ವಲ್ಪವೂ ಕೋತಿಬುದ್ಧಿ ಇರಲಿಲ್ಲ. ತಿಂಡಿ ತಿನ್ನುವಾಗ ಹೊರತು ಉಳಿದ ವೇಳೆಯಲ್ಲೆಲ್ಲಾ ತೂಕಡಿಸಿಕೊಂಡೇ ಇದ್ದಿತು.

ಕೆಲವು ದಿನಗಳಲ್ಲಿ ಹಡಗು ಮುತ್ತಿನ ದ್ವೀಪವನ್ನು ತಲಪಿತು. ಈ ದ್ವೀಪದ ಸುತ್ತಲೂ ಸಮುದ್ರದಲ್ಲಿ ಮುತ್ತಿನ ಚಿಪ್ಪುಗಳು ದೊರಕುತ್ತಿದ್ದುವು. ಈ ದ್ವೀಪದಲ್ಲಿರುವ ಹಳ್ಳಿ ನಿವಾಸಿಗಳು ವರ್ತಕರು ಬಂದಾಗಲೆಲ್ಲಾ ನೀರಿನಲ್ಲಿ ಈಜಿ ಮುಳುಗಿ ಮುತ್ತಿನ ಚಿಪ್ಪುಗಳನ್ನು ಎತ್ತಿಕೊಂಡು ಬಂದು ಅಗ್ಗದ ಬೆಲೆಗೇ ಮಾರುತ್ತಿದ್ದರು. ವರ್ತಕರ ಅದೃಷ್ಟಕ್ಕೆ ತಕ್ಕ ಹಾಗೆ ಒಂದೊಂದು ಸಾರಿ ಒಬ್ಬೊಬ್ಬ ವರ್ತಕನಿಗೆ ಮುತ್ತಿನ ಚಿಪ್ಪುಗಳಲ್ಲಿ ದೊಡ್ಡ ದೊಡ್ಡ ಬೆಲೆ ಬಾಳುವ ಮುತ್ತುಗಳು ದೊರುಕುತ್ತಿದ್ದುವು.

ವರಾಹ ಶೆಟ್ಟಿಯ ಹಡಗು ಆ ದ್ವೀಪದ ಹತ್ತಿರ ಲಂಗರು ಹಾಕಿದ್ದು ಮುತ್ತುಗಳಿಗಾಗಿಯೇ. ಆ ದ್ವೀಪದ ಹಳ್ಳೀ ಹುಡುಗರು ಕೂಗಾಡುತ್ತಾ ಓಡೋಡಿ ಬಂದು ಸಮುದ್ರದ ನೀರಿನಲ್ಲಿ ಧುಮುಕಿದರು. ಅದುವರೆಗೂ ಮೂಲೆಯಲ್ಲಿ ಮೊದ್ದು ಬಡಿದು ಮುದುಡಿ ಕುಳಿತಿದ್ದ ಕೋತಿ ಆ ಹುಡುಗರ ಕೂಗು ಕೇಳಿ ಎದ್ದು ಆ ಚೀಚೆ ನೋಡಿ, ಚೆಂಡಿನ ಹಾಗೆ ಹಡಗಿನೊಳಗಿನಿಂದ ಸಮುದ್ರಕ್ಕೆ ಹಾರಿತು.

ಅದನ್ನು ನೋಡಿ ವರಾಹ ಶೆಟ್ಟಿ "ಅಯ್ಯೋ ಪಾಪ! ರಂಗನಿಗೆ ಕೋತಿ ಕೂಡಾ ದಕ್ಕದೆಂದು ಕಾಣುತ್ತದೆ. ಇಲ್ಲದಿದ್ದರೆ ಇದು ಒಮ್ಮೆಗೇ ಸಮುದ್ರಕ್ಕೆ ಹಾರಿ ಸಾಯುವುದೆಂದರೇನು?" ಎಂದು ಕೊಂಡು ಹೆದರಿದನು.

ಸ್ವಲ್ಪ ಹೊತ್ತಿಗೆ ಆ ಕೋತಿ ಕೈ ತುಂಬಾ ಮುತ್ತಿನ ಚಿಪ್ಪುಗಳನ್ನು ಎದೆಯೊಂದಿಗೆ ಅದುಮಿ ಹಿಡಿದು ಕೊಂಡು ಈಜುತ್ತಾ ಬಂದಿತು. ಹಡಗಿನೊಳಗೆ ಏರಿ ಚಿಪ್ಪುಗಳನ್ನು ಒಂದು ಕಡೆಯಲ್ಲಿಟ್ಟು ಮತ್ತೆ ಸಮುದ್ರಕ್ಕೆ ಹಾರಿತು. ನೋಡುತ್ತಿದ್ದ ಹಾಗೆಯೇ ಅದು ಸುಮಾರು ನೂರು ಮುತ್ತಿನ ಚಿಪ್ಪುಗಳನ್ನು ತಂದು ಕೂಡಿ ಹಾಕಿತು.



ಉಳಿದ ವರ್ತಕರು ಅವರವರಿಗೆ ತೋರಿದಷ್ಟು ಮುತ್ತಿನ ಚಿಪ್ಪುಗಳನ್ನು ಕೊಂಡುಕೊಂಡರು. ಒಬ್ಬರಿಗಾದರೂ ಒಳ್ಳೊಳ್ಳೆಯ ಮೂರು ನಾಲ್ಕು ಮುತ್ತುಗಳಿಗಿಂತ ಹೆಚ್ಚು ಸಿಕ್ಕಲಿಲ್ಲ. ಹೆಚ್ಚಾಗಿ ಎಲ್ಲವೂ ಚಿಕ್ಕ ಚಿಕ್ಕ ಮುತ್ತುಗಳು. ಕೆಲವುಂದಿ ಅದೃಷ್ಟ ಹೀನರಿಗೆ ಒಂದು ಮುತ್ತು ಕೂಡಾ ಸಿಗಲಿಲ್ಲ. ಆದರೆ ಮುದಿಕೋತಿ ತಂದ ಮುತ್ತಿನ ಚಿಪ್ಪುಗಳಲ್ಲಿ ಅನೇಕ ದೊಡ್ಡ ಮುತ್ತುಗಳೂ, ಸಣ್ಣ ಸಣ್ಣ ಮುತ್ತುಗಳೂ ತುಂಬಾ ಇದ್ದುವು.

ಜಡ ಹಿಡಿದ ಕೋತಿ ಹೀಗೆ ಮಾಡಲು ಕಾರಣವೇನೆಂದರೆ, ಅದು ಈ ಮುತ್ತಿನ ದ್ವೀಪದಲ್ಲೇ ಹುಟ್ಟಿ ಬೆಳೆದ ಕೋತಿ. ಇದರ ಯಜಮಾನ ಅಲ್ಲಿಯ ಒಬ್ಬ ಹಳ್ಳಿಯವನೇ. ಅವನು ಅದಕ್ಕೆ ಮುತ್ತಿನ ಚಿಪ್ಪು ಎತ್ತಿಕೊಂಡು ಬರುವ ವಿದ್ಯೆಯನ್ನು ಕಲಿಸಿದ್ದನು. ಸ್ವಲ್ಪಕಾಲದ ಮೇಲೆ ಅವನು ಸತ್ತನು. ಆ ಮೇಲೆ ಆ ಕೋತಿಯನ್ನು ಯಾರೋ ಹಿಡಿದುಕೊಂಡು ಹಡಗಿನಲ್ಲಿ ಎಲ್ಲಿಗೋ ಒಯ್ದು ಬೆಳೆಸಿದರು. ಅದು ಚುರುಕುಗೆಟ್ಟು ಯಾವಾಗಲೂ ನಿದ್ದೆ ಮತ್ತಿನಲ್ಲಿರುವುದನ್ನು ನೋಡಿ ಅದನ್ನು ಒಂದು ದ್ವೀಪದ ಕೋತಿಗಳನ್ನಾಡಿಸುವವನಿಗೆ, ಅವನು ಕೊಟ್ಟ ಬೆಲೆಗೆ ಮಾರಿಬಿಟ್ಟರು. ಅದೇ ಈಗ ರಂಗನ ಸೊತ್ತಾಗಿ, ಆಗಲೇ ಅವನಿಗೊಂದು ನಿಧಿಯನ್ನೂ ಶೇಖರಿಸಿಟ್ಟಿತು. ಕೋತಿಗಳನ್ನು ಆಡಿಸುವವನಿಗೆ ಅದರ ಕರಾಮತಿಯನ್ನು ತಿಳಿಯುವ ಅದೃಷ್ಟವಿದ್ದಿಲ್ಲ.

ವರಾಹ ಶೆಟ್ಟಿ ರಂಗನ ಮುತ್ತು ಚಿಪ್ಪುಗಳನ್ನು ಭದ್ರವಾಗಿಟ್ಟುಕೊಂಡು, ಪಟ್ಟಣಕ್ಕೆ ತಲಪಿದ ಮೇಲೆ ಅವುಗಳನ್ನೂ, ಕೋತಿಯನ್ನೂ ರಂಗನಿಗೆ ಕೊಟ್ಟನು. ಮೊದಲೇ ಹೇಳಿದ ಪ್ರಕಾರ ಉಳಿದ ವರ್ತಕರೆಲ್ಲಾ ತಲಾ ಐದ್ಯೆದು ಚಿನ್ನದ ಮೊಹರಿಗಳನ್ನು ಸೇರಿಸಿ ರಂಗನಿಗೆ ಒಪ್ಪಿಸಿದರು.

ಆ ನಿಧಿಯನ್ನು ನೋಡಿದ ಮೇಲೆ ರಂಗನಿಗೂ ಚುರುಕು ಬಂದಿತು. ಮೊದಲು ಉಪ್ಪರಿಗೇ ಮನೆಯನ್ನು ಕಟ್ಟಿಸಿದನು. ಮುತ್ತುಗಳ ವ್ಯಾಪಾರದಲ್ಲಿ ಬಹಳ ಧನವು ಸೇರಿತು. ಮುತ್ತಿನ ದ್ವೀಪವನ್ನು ನೋಡಿದ ಕೂಡಲೇ ಕೋತಿಗೆ ಮತ್ತು ಬಿಟ್ಟ ಹಾಗೆಯೇ ರಂಗನಿಗೂ ಕೈ ತುಂಬ ಫಳಫಳಿಸುವ ಕೆಲಸ ಬಿದ್ದ ಕೂಡಲೇ ಅವನನ್ನು ಕವಿದ ಜಡ ಬಿಟ್ಟು ಹೋಯಿತು. ಅವನು ವರ್ಷಕ್ಕೆ ಒಂದು ಸಾರಿ ಆ ಕೋತಿಯನ್ನು ಕರೆದುಕೊಂಡು ಮುತ್ತಿನ ದ್ವೀಪಕ್ಕೆ ಹೋಗಿ ಸಿಕ್ಕಿದಷ್ಟು ಮುತ್ತಿನ ಚಿಪ್ಪುಗಳನ್ನು ತೆಗೆದುಕೊಂಡು ಹಿಂದಿರುಗುತ್ತಿದ್ದನು. ತುಂಬಾ ಮುತ್ತುಗಳು ಸಿಗುತ್ತಿದ್ದುವು. ಈ ವಿಧವಾಗಿ ರಂಗನು ಭಾರೀ ಧನಿಕನಾಗಿ ಮದುವೆ ಮಾಡಿಕೊಂಡು ಬಹಳ ಕಾಲ ಸುಖವಾಗಿದ್ದನು.





# ಶಾಸ್ತಿ

ಒಂದು ಊರಿನಲ್ಲಿ ಪರಂಧಾಮನೆಂಬವನು ಹಣದಿಂದಲೇ ಹಣ ಸಂಪಾದಿಸುವ ಲೇವಾದೇವಿ ನಡೆಸುವುದರಲ್ಲಿ ಬಲುಜಾಣ. ಒಂದು ಸಾರಿ ಜಯರಾಮನೆಂಬ ರೈತನು ಬಂದು, “ಅಯ್ಯಾ, ನನ್ನ ಮಗಳಿಗೆ ಮದುವೆ ಕೂಡಿ ಬಂದಿದೆ. ನಿಶ್ಚಯವಾದ ಮೇಲೆ ಮದುವೆಯ ಖರ್ಚಿಗೆ ಹತ್ತು ಸಾವಿರ ರೂಪಾಯಿ ಬೇಕಾಗುತ್ತದೆ. ಮುಂದಾಗಿ ನಿಮ್ಮ ಹತ್ತಿರ ಹೇಳಿ ಇಡೋಣವೆಂದು ಬಂದೆನು. ಸಾಲವನ್ನು ಕಂತುಗಳ ಮೇಲೆ ತೀರಿಸುತ್ತೇನೆ. ಆಗ ಬಹುದಷ್ಟೆ?” ಎಂದನು.

ಜಯರಾಮನಿಗೆ ಅಷ್ಟು ದೊಡ್ಡ ಮೊತ್ತವನ್ನು ಸಾಲ ಕೊಡುವವರು ಬೇರೆಯಾರೂ ಇರಲಿಲ್ಲ. ಅದೂ ಅಲ್ಲದೆ ಇದು ಅವನಿಗೆ ಅತ್ಯಗತ್ಯವಾದ ಖರ್ಚು. ಇದನ್ನು ತಿಳಿದಿದ್ದ ಪರಂಧಾಮನು ಹತ್ತು ಸಾವಿರ ಕೊಡಲು ಅಡ್ಡಿಯಿಲ್ಲವೆಂದೂ, ಬಡ್ಡಿ ಮಾತ್ರ ಹೆಚ್ಚಾಗಿ ಕೊಡಬೇಕಾಗುತ್ತದೆಂದೂ ಹೇಳಿದನು.

“ಅಯ್ಯಾ, ನನ್ನಿಂದ ಏನೋ ಸ್ವಲ್ಪ ಬಡ್ಡಿ ಮಾತ್ರ ಕೊಡಲು ಸಾಧ್ಯ. ಹೆಚ್ಚು ಬಡ್ಡಿಯಾದರೆ ಸಾಲವೇ ಬೇಡ. ನಮ್ಮ ತಾತನ ಕಾಲದ ಹಳೇ ಮನೆಯನ್ನು ಮಾರಿಯಾದರೂ ಮಗಳ ಮದುವೆ ಮಾಡಿಕೊಳ್ಳುತ್ತೇನೆ ಬಿಡಿ” ಎಂದು ಅಲಕ್ಷ್ಯವಾಗಿ ಹೇಳಿ ಜಯರಾಮನು ಹೊರಟು ಹೋದನು.

ಕೈಗೆ ಸಿಕ್ಕಿದ ಮೀನು ಜಾರಿ ಹೋದಂತೆ ಅನಿಸಿತು ಪರಂಧಾಮನಿಗೆ. ಜಯರಾಮನ ತಾತನ ಮನೆ ದೆವ್ವಗಳ ಕೊಂಪೆ ಎಂದು ಪುಕಾರು ಹುಟ್ಟಿಸಿ, ಅದನ್ನು ಯಾರೂ ಕೊಂಡು ಕೊಳ್ಳದ ಹಾಗೆ ಮಾಡಿದರೆ, ಜಯರಾಮನು ತನ್ನ ಬಳಿಗೆ ಹಣ ಕೇಳಲು ಬರುತ್ತಾನೆಂದು ತೋರಿತು ಪರಂಧಾಮನಿಗೆ. ಹಾಗೆಯೇ ನಾಲ್ಕಾರು ಮಂದಿಯೊಂದಿಗೆ ಹೇಳಿದನು.

ಜಯರಾಮನು ಮತ್ತೆ ಕೆಲವು ಕಡೆಗಳಲ್ಲಿ ಸಾಲ ಹುಟ್ಟಿಸುವ ಪ್ರಯತ್ನ ಮಾಡಿದನು. ಅದೇನೂ ಫಲಿಸಲಿಲ್ಲ. ಕಡೆಗೆ ತಾತನ ಕಾಲದ ಹಳೇ ಮನೆಯನ್ನು ಮಾರುವುದಾಗಿ ಹೇಳಿ ಅವರಿವರೊಡನೆ ವಿಚಾರಿಸಿದನು. ಅದು ದೆವ್ವಗಳ ಕೊಂಪೆಯೆಂದುಕೊಂಡು ಯಾರೂ ಕೊಂಡು ಕೊಳ್ಳಲು ಮುಂದೆ ಬರಲಿಲ್ಲ.

ಆಗ ಪರಂಧಾಮನ ಮನೆಗೆ ಹಳೇ ಮಿತ್ರನಾದ ಒಬ್ಬ ಜಮೀನ್ದಾರನು ಅತಿಥಿಯಾಗಿ ಬಂದು ನಾಲ್ಕು ದಿನಗಳಿದ್ದನು. ಅವನು ತಿರುಗಾಡುತ್ತ ಜಯರಾಮನ ಪೂರ್ವಿಕರ ಮನೆಯನ್ನು ನೋಡಿ ಮುಗ್ಧನಾಗಿ,

“ಶರತ್”

"ಇಂತಹ ಮನೆಯನ್ನು ಈಗ ಕಟ್ಟುವವರೇ ಇಲ್ಲ. ಕಂಬ ಬಾಗಿಲುಗಳ ಕೆತ್ತನೆಗಳಿಗೆ ಎಷ್ಟಾದರೂ ಕೊಡಬಹುದು. ಮಾರುವವರಾದರೆ ಲಕ್ಷವಾದರೂ ಕೊಂಡುಕೊಂಡೇನು." ಎಂದನು ಪರಂಧಾಮನೊಂದಿಗೆ.

ಆ ಮನೆಯನ್ನು ಮಾರುತ್ತಾರೆಂಬ ಸಂಗತಿಯನ್ನು ಪರಂಧಾಮನು ಜಮೀನ್ದಾರನೊಂದಿಗೆ ಹೇಳಲಿಲ್ಲ. ಜಮೀನ್ದಾರನು ಹೊರಟು ಹೋದ ಮೇಲೆ ಪರಂದಾಮನು ಜಯರಾಮನ ಬಳಿಗೆ ಹೋಗಿ, "ಏನಪ್ಪಾ, ನಿನ್ನ ಮಗಳ ಮದುವೆಯ ಖರ್ಚಿಗಾಗಿ ನಿಮ್ಮ ತಾತನ ಮನೆಯನ್ನು ಮಾರುವೆನೆಂದು ಹೇಳಿದೆಯಲ್ಲಾ? ನಿನಗೆ ಬೇಕಾದ ಹತ್ತು ಸಾವಿರ ನಾನೇ ಕೊಡುತ್ತೇನೆ. ನನಗೇ ಮಾರಿಬಿಡು" ಎಂದನು.

ಜಯರಾಮನು ಮಂದಮತಿಯಲ್ಲ. ಪರಂಧಾಮನು ಮನೆಯನ್ನು ಕೊಂಡುಕೊಳ್ಳುವೆನೆಂಬುದರಲ್ಲಿ ಏನೋ ತಂತ್ರವಿದ್ದೀತು ಎಂದುಕೊಂಡು ಅವನು, "ನನಗೆ ಸಾಲವಾಗಿ ಬೇಕಾದ್ದು ಹತ್ತು ಸಾವಿರ ಎಂದೆನೇ ಹೊರತು ಆ ಮನೆಯ ಬೆಲೆ ಹತ್ತು ಸಾವಿರವೆಂದು ಯಾರು ಹೇಳಿದರಯ್ಯಾ? ಕಡೇಪಕ್ಷ ಐವತ್ತು ಸಾವಿರ ಬೆಲೆ ಬಂದೀತು ಆ ಮನೆಗೆ. ಸರಿಯಾದ ಬೆಲೆ ಕೊಡುವವರಿಗೇ ಅದನ್ನು ಮಾರುತ್ತೇನೆ. ನೀವೇನೂ ಶ್ರಮಪಡಬೇಕಾಗಿಲ್ಲ ಬಿಡಿ" ಎಂದನು. ಐವತ್ತು ಸಾವಿರ ಕೊಟ್ಟುಕೊಂಡರೂ ಅದನ್ನು ಲಕ್ಷ ರೂಪಾಯಿಗೆ ಜಮೀನ್ದಾರನಿಗೆ ಮಾರಿ ಐವತ್ತು ಸಾವಿರ ಲಾಭ ಮಾಡಿಕೊಳ್ಳಬಹುದಷ್ಟೆ? ಅಂತಲೇ ಪರಂಧಾಮನು ಐವತ್ತು ಸಾವಿರ ಕೊಟ್ಟು ಆ ಹಳೆಯ ಮನೆಯನ್ನು ತಾನೇ ಕೊಂಡುಕೊಂಡನು.

ಜಯರಾಮನಾದರೂ ಮಾತಿಗೆ ಹೇಳಿ ಬಿಟ್ಟನೇ ಹೊರತು ತನ್ನ ತಾತನ ಕಾಲದ ಮನೆಗೆ ಇಪ್ಪತ್ತು ಸಾವಿರವಾದರೂ ಬಂದೀತೆಂದು ಅಂದುಕೊಂಡಿರಲಿಲ್ಲ. ಅವನು ಸಂತೋಷದಿಂದ ತನ್ನ ಮಗಳ ಮದುವೆಯನ್ನು ವೈಭವದಿಂದಲೇ ಮಾಡಿ, ಸ್ವಲ್ಪ ಹೊಲವನ್ನೂ ಕೊಂಡುಕೊಂಡನು.

ಮುಂದೆ ಕೆಲವು ದಿನಗಳು ಕಳೆದ ಮೇಲೆ ಪರಂಧಾಮನು ತನ್ನ ಮಿತ್ರನಾದ ಜಮೀನ್ದಾರನಿಗೆ, ಅವನು ಮೆಚ್ಚಿದ ಹಳೇಮನೆ ಮಾರಾಟಕ್ಕೆ ಸಿದ್ಧವಾಗಿದೆ ಎಂದು ಸಮಾಚಾರ ಕಳುಹಿಸಿದನು.

"ಆ ಹಳೇಮನೆಯನ್ನು ಕೊಂಡುಕೊಳ್ಳುವ ಆಲೋಚನೆ ಈಗ ಬಿಟ್ಟಿದ್ದೇನೆ. ಅದು ದೆವ್ವಗಳ ಕೊಂಪೆ ಎಂದು ಎಲ್ಲರೂ ಹೇಳುತಿದ್ದಾರಲ್ಲ? ನಿಮಗೂ ಗೊತ್ತಿರಬಹುದು. ಅಂತಹುದನ್ನು ಕೊಂಡುಕೊಂಡು ತೊಂದರೆಗೆ ಸಿಕ್ಕಿಬೀಳಲು ನನಗಿಷ್ಟವಿಲ್ಲ" ಎಂದು ಜಮೀನ್ದಾರನು ಪರಂಧಾಮನಿಗೆ ಪ್ರತ್ಯುತ್ತರ ಕಳುಹಿಸಿದನು. ಪರಂಧಾಮನು ತಾನು ತೋಡಿದ ಹೊಂಡಕ್ಕೆ ತಾನೇ ಬಿದ್ದ ಹಾಗಾಯಿತು.





# ದೇವೀಭಾಗವತ

ಒಂದಾನೊಂದು ದಿನ ನಾರದ ಮುನಿ ಲೋಕ ಸಂಚಾರ ಮಾಡುತ್ತ, ವ್ಯಾಸಮುನಿಯ ಆಶ್ರಮಕ್ಕೆ ಬಂದನು. ಎಲ್ಲಿಗೆಂದರಲ್ಲಿಗೆ ಆಕಸ್ಮಿಕವಾಗಿ ಆಗಮಿಸುವವನಾದ ನಾರದನನ್ನು ನೋಡಿ, ವ್ಯಾಸನು ಭಕ್ತಿಪೂರ್ವಕವಾಗಿ ಅರ್ಘ್ಯಪಾದ್ಯಾದಿಗಳನ್ನಿತ್ತು ಗೌರವಿಸಿ ಕುಳಿತುಕೊಳ್ಳಿಸಿ, ಕುಶಲಮಾತುಗಳನ್ನಾಡಿದನು. ಬಳಿಕ ವ್ಯಾಸನು ತನ್ನ ಚಿಂತೆಯನ್ನು ಕುರಿತು ಹೇಳಲು ತೊಡಗಿ, "ನಾರದ ಮಹಾತ್ಮಾ, ಸಂಸಾರದಲ್ಲಿ ಸುಖವೆಂಬುದು ಸ್ವಲ್ಪ ಕೂಡಾ ಇಲ್ಲವೇನು ?" ಎಂದು ಪ್ರಶ್ನಿಸಿದನು. ಹಾಗೆಯೇ ತನ್ನ ಅನುಭವವನ್ನೆಲ್ಲಾ ಒಂದೊಂದಾಗಿ ನಾರದನ ಮುಂದೆ ತೋಡಿಕೊಂಡು, ತನ್ನ ಪ್ರಶ್ನೆಯ ಕಾರಣವನ್ನೂ ವಿವರಿಸಿದನು.

ವ್ಯಾಸನು ಹುಟ್ಟಿದ ಕೂಡಲೇ ತಾಯಿಬಿಟ್ಟು ಹೋಗಿಬಿಟ್ಟಳು. ಅವನು ತಪಸ್ಸು ಮಾಡಿಕೊಂಡೇ ಶಿವನ ದಯದಿಂದ ಮಗನನ್ನು ಸಂಪಾದಿಸಿಕೊಂಡರೂ, ಆ ಮಗನು ತಂದೆಯನ್ನು ದುಃಖದಲ್ಲಿ ಮುಳುಗಿಸಿ ತನ್ನ ಪಾಡಿಗೆ ಹೊರಟುಹೋದನು. ಈ ವಿಧವಾಗಿ ಹಿಂದಿನವರಿಂದಲೂ ಮುಂದಿನವರಿಂದಲೂ ವಿಸರ್ಜಿಸಲ್ಪಟ್ಟು ವಿರಕ್ತನಾಗಿ ಹೋದ ವ್ಯಾಸನಿಗೆ ಸಂಸಾರ ಬಂಧನದಲ್ಲಿ ಸಿಕ್ಕಿಕೊಳ್ಳುವ ಅಗತ್ಯ ಬಂದಿತು. ಆತನನ್ನು ಹಡೆದ ತಾಯಿಯಾದ ಸತ್ಯವತಿ ಶಂತನುವನ್ನು ಮದುವೆಯಾಗಿ ಮಕ್ಕಳನ್ನು ಪಡೆದು ಆ ಮೇಲೆ ಮೊದಲು ಗಂಡನನ್ನೂ, ಅನಂತರ ತನ್ನ ಮಕ್ಕಳನ್ನೂ ಕಳೆದುಕೊಂಡಳು. ಆ ಸಂದರ್ಭದಲ್ಲಿ ಅವಳ ಅಪೇಕ್ಷೆಯಂತೆ ವ್ಯಾಸನು ಅವಳ ಸೊಸೆಯಂದಿರ ಹೊಟ್ಟೆಯಲ್ಲಿ ಮಕ್ಕಳಾಗುವಂತೆ ಮಾಡಿದನು. ಆ ಪುತ್ರರಲ್ಲಿ ಒಬ್ಬನು ಕುರುಡ ಧೃತರಾಷ್ಟ್ರ; ಇನ್ನೊಬ್ಬ ಬಿಳಿಚಿಗಟ್ಟಿದ ಪಾಂಡು. ಮೂರನೆಯ ವಿದುರನು ಹುಟ್ಟಿದ್ದು ದಾಸಿಯ ಹೊಟ್ಟೆಯಲ್ಲಿ. ಆ ಮೂವರು ಮಕ್ಕಳೂ ವ್ಯಾಸನ ಪುತ್ರರೇ ಆದರೂ, ವ್ಯಾಸನಿಗೆ ಪಿಂಡಪ್ರದಾನ ಮಾಡಲು ಅವರು ಮೂವರೂ ಉಪಯೋಗಕ್ಕೆ ಬರುವವರಲ್ಲ !

ಆ ಮೇಲೆ ವ್ಯಾಸನ ಸಂತತಿಯವರಾದ ಧೃತರಾಷ್ಟ್ರನೂ, ಪಾಂಡುವೂ ಇನ್ನೊಂದು ಬಗೆಯವರನ್ನು

## ೨೨. ನಾರದ ಸಂಸಾರ




ಪಡೆದರು. ಆ ದಾಯಾದಿಗಳ ಜಗಳದಲ್ಲಿ ವ್ಯಾಸನು ಆಗಾಗ ತಲೆದೂರಿಸಬೇಕಾಗಿಬಂತು. ಪಾಂಡುಪುತ್ರರು ಅರಣ್ಯವಾಸ ಮಾಡುತ್ತ ನಾನಾಕಷ್ಟಗಳಿಗೆ ಗುರಿಯಾಗುವುದನ್ನು ನೋಡಬೇಕಾಯಿತು.

ಈ ವಿಧವಾಗಿ ವ್ಯಾಸನು ಸುಖದುಃಖಗಳ ಮಧ್ಯೆ ತಾನು ಹೇಗೆ ನಜ್ಜುಗುಜ್ಜಾದೆನೆಂಬುದನ್ನು ಹೇಳಿ, “ನಾರದ ಮಹಾತ್ಮಾ, ಹೀಗೆ ಲೋಕದಲ್ಲಿ ತಂದೆ ಮಕ್ಕಳು, ಮೊಮ್ಮಕ್ಕಳು ಎಂಬ ಭ್ರಾಂತಿಯಿಂದ ನಿವಾರಣೆಯಾಗಲು ಸಾಧ್ಯವೇ ಇಲ್ಲವೆ? ಈ ಸಂಸಾರದಲ್ಲಿ ಸಿಕ್ಕಿಕೊಳ್ಳದಿದ್ದರೆ ಪ್ರಪಂಚವೇ ನಡೆಯದೆಂಬುದೇನೋ ನಿಜವಾದರೂ ಸಂಸಾರದಲ್ಲಿ ಸಿಕ್ಕಿದವನ ಮನಸ್ಸಿಗೆ ಸುಖ ಹೇಗೆ ಬರುತ್ತದೆ? ನೀನಾದರೂ ಸ್ವಲ್ಪ ದಯಮಾಡಿ ಹೇಳಬಲ್ಲೆಯಾ?” ಎಂದು ಕೇಳಿದನು.

ಅದಕ್ಕೆ ನಾರದನು ಮುಗುಳು ನಗುತ್ತ, “ಮಾಯಾಮೋಹಗಳಿಂದ ಸಂಸಾರದಲ್ಲಿ ಸಿಕ್ಕಿಕೊಳ್ಳುವುದೇ ಮನಸ್ಸಿಗೊಂದು ಸುಖ. ಸಂಸಾರದಲ್ಲಿ ಸಿಕ್ಕಿ ಮೋಹಪರವಶನಾಗದ ಪ್ರಾಣಿ ಯಾರಿದ್ದಾರೆ? ಎಲ್ಲಿದ್ದಾರೆ? ಹರಿಹರಬ್ರಹ್ಮಾದಿಗಳು ಕೂಡ ಮೋಹದಲ್ಲಿ ಬಿದ್ದುದರಿಂದಲೇ ನನ್ನನ್ನು ನೋಡಿ ದೊಡ್ಡ ಜ್ಞಾನಿ ಎಂದು ಮೆಚ್ಚಿಕೊಳ್ಳುತ್ತಾರೆ. ಅಂತಲೇ ನೀವುಕೂಡಾ ನನ್ನನ್ನು ಕೇಳುವಿರಿ. ಆದರೆ ಅದು ನಿಜವಲ್ಲ. ಒಂದೆರಡು ಸಾರಿ ನಾನು ಕೂಡಾ ಮೋಹದಲ್ಲಿ ಬಿದ್ದು ಹೆಂಡತಿಗಾಗಿ ಎಂತಹ ಪಾಡುಪಟ್ಟಿದ್ದೇನೆ ಗೊತ್ತಾ? ಅದನ್ನು ಕೇಳಿದರೆ ಏನು ಹೇಳುವಿರೋ?” ಎಂದು ತಾನು ಅನುಭವಿಸಿದ ಸಂಸಾರದ ವಿಷಯವನ್ನು ಕುರಿತು ವ್ಯಾಸನಿಗೆ ವಿವರಿಸಿ ಹೇಳಿದನು:

ಒಂದುಸಾರಿ ನಾರದನೂ, ಅವನ ಸೋದರಳಿಯನಾದ ಪರ್ವತನೂ ಭೂಲೋಕ ಸಂಚಾರ ಮಾಡುತ್ತ ಪುಣ್ಯ ಕ್ಷೇತ್ರಗಳನ್ನೂ, ಋಷ್ಯಾಶ್ರಮಗಳನ್ನೂ ನೋಡುತ್ತ ತಿರುಗುತ್ತಿದ್ದರು. ಆಗ ಅವರು ತಮ್ಮೊಳಗೆ ತಾವು ಒಂದು ನಿರ್ಣಯ ಮಾಡಿಕೊಂಡಿದ್ದರು. ಅದೇನೆಂದರೆ, ತಮ್ಮ ಮನಸ್ಸಿನೊಳಗೆ ನಡೆಯುವ ಆಲೋಚನೆಗಳನ್ನು ಮುಚ್ಚಿಟ್ಟುಕೊಳ್ಳದೆ ಒಬ್ಬರು ಇನ್ನೊಬ್ಬರೊಂದಿಗೆ ಹೇಳಲೇಬೇಕು. ಇಬ್ಬರೊಳಗೆ ಯಾವ ಮುಚ್ಚು ಮರೆಯೂ ಇರಕೂಡದು.

ಆ ರೀತಿಯಾಗಿ ಅವರು ಸಂಚಾರ ಮಾಡಿಕೊಂಡಿರುವಾಗ ಬಿಸಿಲು ಕಾಲವು ಹೋಗಿ ಮಳೆಗಾಲವು ಪ್ರಾರಂಭವಾಯಿತು. ನಾಲ್ಕು ತಿಂಗಳವರೆಗೆ ನಡೆಯುವ ಮಳೆಗಾಲವನ್ನು ಕಳೆಯಲು ಎಲ್ಲೋ ಒಂದು ಜಾಗದಲ್ಲಿ ಇದ್ದುಬಿಡಬೇಕಾಗಿತ್ತು. ಆಗ ಅವರು ಒಂದು ನಗರವನ್ನು ತಲಪಿದ್ದರು. ಅಲ್ಲಿ ಸಂಜಯನೆಂಬವನು ರಾಜನಾಗಿದ್ದನು.

ಚಾತುರ್ಮಾಸ್ಯ ಕಳೆಯಲು ಆ ರಾಜನ ಮನೆಯೇ ಒಳ್ಳೆಯದೆನಿಸಿತು ಅವರಿಗೆ. ರಾಜನೊಂದಿಗೆ ತಮ್ಮ ಸಂಗತಿಯನ್ನು ಹೇಳಿಕೊಂಡ ಕೂಡಲೇ ರಾಜನು ಸಂತೋಷದಿಂದ ಅವರು ಅಲ್ಲಿ ತಂಗಲು ಒಪ್ಪಿ

ಕೊಂಡನು. ತಾವು ಭಿಕ್ಷಾಟನೆಯಿಂದ ದಿನಗಳೆಯುತ್ತೇವೆಂದರೂ ರಾಜನು ಅವರಿಗೆ ಒತ್ತಾಯಪೂರ್ವಕ ಎಲ್ಲಾ ಸೌಕರ್ಯಗಳನ್ನೂ ಒದಗಿಸಿದನು. ರಾಜನ ಉಪಚಾರಗಳು ಅವರಿಗೆ ಹಿತವೆನಿಸಿತು. ರಾಜನ ಮನೆಯಲ್ಲಿ ಅವರು ಸುಖವಾಗಿರ ತೊಡಗಿದರು. ರಾಜನ ಮಗಳು ಮದಯಂತಿ ತಾನೇ ಸ್ವತಃ ಅವರಿಗೆ ಪರಿಚರ್ಯೆಗಳನ್ನು ಮಾಡ ತೊಡಗಿದಳು. ಅವರ ಸ್ನಾನಕ್ಕೂ, ಭೋಜನಕ್ಕೂ, ಮಲಗಲಿಕ್ಕೂ ಅವಳು ಸೊಗಸಾದ ಏರ್ಪಾಡುಗಳನ್ನು ಬಹಳ ಶ್ರದ್ಧೆಯಿಂದ ಇಬ್ಬರೊಳಗೆ ಸ್ವಲ್ಪವೂ ಪಕ್ಷಪಾತವಿಲ್ಲದಂತೆ ಮಾಡುತ್ತಿದ್ದಳು. ಅರಮನೆಯಲ್ಲಿ ಅವರಿಗೆ ವೇದಾಧ್ಯಯನಗಳಿಂದಲೂ, ಗಾನ ವಿನೋದಗಳಿಂದಲೂ ಒಳ್ಳೆಯ ರೀತಿಯಲ್ಲಿ ಕಾಲಕ್ಷೇಪವಾಗುತ್ತಿತ್ತು.

ಕ್ರಮವಾಗಿ ಅದರಲ್ಲಿ ವ್ಯತ್ಯಾಸವಾಗ ತೊಡಗಿತು. ಮೆಲ್ಲಮೆಲ್ಲನೆ ಮದಯಂತಿಗೆ ನಾರದನ ಮೇಲೆ ವಿಶೇಷ ಶ್ರದ್ಧೆ ಬರತೊಡಗಿ ಮೋಹಕ್ಕೆ ತಿರುಗಿತು. ಆತನ ವೀಣಾನಾದವೂ, ಸಾಮವೇದದ ಗಾನವೂ ಅವಳನ್ನು ತುಂಬಾ ಆಕರ್ಷಿಸಿದುವು. ಪ್ರೇಮಪೂರಿತವಾದ ಅವಳ ಸೇವಾ ಶುಶ್ರೂಷೆಗಳು ನಾರದನನ್ನು ಕೂಡಾ ಬಲವಾಗಿ ಆಕರ್ಷಣೆಮಾಡಿದುವು. ಅವಳು ಸಹಜವಾಗಿಯೇ ಇಬ್ಬರಿಗೂ ಒದಗಿಸುವ ಸೌಕರ್ಯಗಳಲ್ಲಿ ನಾರದನ ಮೇಲೆಯೇ ಹೆಚ್ಚಿನ ಪಕ್ಷಪಾತ ತೋರಿಸ ತೊಡಗಿದಳು. ಸ್ನಾನಮಾಡಲು ನಾರದನಿಗೆ ಸುವಾಸನೆಯ ಬಿಸಿ ನೀರಾದರೆ, ಪರ್ವತನಿಗೆ ಬರಿ ತಣ್ಣೀರೇ ಗತಿಯಾಯಿತು. ಊಟದಲ್ಲಿ ನಾರದನಿಗೆ ಗಟ್ಟಿ ಮೊಸರು ಬಿದ್ದರೆ, ಪರ್ವತನಿಗೆ ಮಜ್ಜಿಗೆಯೇ. ಮಲಗಲು ಹಾಸಿಗೆಗಳು ಕೂಡಾ ಇಬ್ಬರಿಗೂ ಒಂದೇ ವಿಧವಾಗಿರುತ್ತಿದ್ದಿಲ್ಲ. ಅವಳು ನಾರದನ ಕಡೆಗೆ ನೋಡುವ ನೋಟವೋ ಹೇಳ ತೀರದು! ಇದೆಲ್ಲಾ ಬೂದಿಯೊಳಗಿನ ಬೆಂಕಿಯ ಹಾಗೆ ಎಷ್ಟು ದಿನ ಮುಚ್ಚುಮರೆಯಾಗಿರಲು ಸಾಧ್ಯ?



ಹೀಗೆ ನಾರದ ಪರ್ವತರಿಗೆ ಮದಯಂತಿ ಮಾಡುವ ಪರಿಚರ್ಯೆಗಳಲ್ಲಿ ಎಷ್ಟೋ ವ್ಯತ್ಯಾಸಗಳು ಹೆಡೆಯೆತ್ತಿ ಕಾಣುತ್ತಿರಲು, ಪರ್ವತನು ನಾರದನೊಂದಿಗೆ ಏಕಾಂತದಲ್ಲಿ, "ಈ ರಾಜಕುಮಾರಿಯ ರೀತಿ ನೀತಿ ಪ್ರವರ್ತನೆಗಳನ್ನು ನೋಡಿದರೆ ನಿನ್ನನ್ನು ವರಿಸಿದವಳ ಹಾಗೆ ಕಾಣುತ್ತದಲ್ಲಾ? ನಿನಗೆ ಕೂಡಾ ಅವಳ ಮೇಲೆ ಮೋಹ ಬಂದ ಹಾಗಿದೆ. ಹೀಗಿರುವಾಗ ನಮ್ಮೊಳಗೆ ರಹಸ್ಯ ಮುಚ್ಚಿಟ್ಟುಕೊಳ್ಳಬಾರದೆಂಬ ನಿಯಮವನ್ನು ಮರೆತೆಯೇನು? ಮುಚ್ಚುಮರೆ ಸಾಕು, ನಿಜ ಹೇಳಿಬಿಡು! ನೀನು ಹೇಳಿದ ಮಾತಿನಂತೆ ನಡೆದಿಲ್ಲ, ಹೌದಾ?" ಎಂದನು.

ನಾರದನು ಸ್ವಲ್ಪ ನಾಚಿಕೊಂಡವನಾಗಿ, "ಪರ್ವತ ಮುನೀಂದ್ರಾ! ಅಡಗಿಸಿಡಲು ಏನಿದೆ? ರಾಜಕುಮಾರಿ ನನ್ನನ್ನು ಮೆಚ್ಚಿದ್ದಾಳೆ. ನಾನೂ ಅವಳನ್ನು ಪ್ರೇಮಿಸುತ್ತೇನೆ. ಇನ್ನೇನಿದೆ? ಈಗ ನಿಜ ಹೇಳಿಬಿಟ್ಟಿದ್ದೇನೆ. ಆಯಿತಷ್ಟೆ?" ಎಂದನು.



ಆ ಮಾತು ಕೇಳಿ ಪರ್ವತನು ಕೋಪದಿಂದ, "ನಾನು ಕೇಳಿದ ಮೇಲೆ ಹೇಳಿ, ಆಯಿತಷ್ಟೇ ಅನ್ನುವಿಯಾ? ನಿಯಮ ತಪ್ಪಿ ನನ್ನನ್ನು ಮೋಸ ಪಡಿಸಿದ ನಿನ್ನ ಮೋರೆ ವಾನರಮುಖವಾಗಲಿ!" ಎಂದು ಶಪಿಸಿದನು.

ನಾರದನಿಗೂ ಕೋಪ ಉಕ್ಕಿತು. "ಈ ಒಂದು ಸಣ್ಣ ತಪ್ಪಿಗೆ ನನ್ನನ್ನು ಶಪಿಸಿದ ನಿನಗೆ ಸ್ವರ್ಗಕ್ಕೇರುವ ಶಕ್ತಿ ಹೋಗಲಿ. ಭೂಮಿಯಲ್ಲೇ ಸುತ್ತಿಕೊಂಡಿರು!" ಎಂದು ಇದಿರು ಶಾಪವಿತ್ತನು.

ಹೀಗೆ ಶಾಪ ಪಡೆದ ಪರ್ವತನು ಅಲ್ಲಿ ನಿಲ್ಲದೆ ಸಟಕ್ಕನೆ ಹೊರಟುಹೋದನು. ನಾರದನಿಗೆ ಕೋತಿಯ ಮುಖವೂ ಉಂಟಾಯಿತು.

ಆದರೂ ಮದಯಂತಿಯ ನಡೆವಳಿಕೆಯಲ್ಲಿ ಏನೂ ಹೆಚ್ಚು ಕಡಿಮೆಯಾಗಲಿಲ್ಲ. ಶಾಪದ ವಿಷಯ ತಿಳಿದು ಅನುತಾಪಗೊಂಡು ನಾರದನ ಮೇಲೆ ಇನ್ನಷ್ಟು ಪ್ರೇಮವೇ ಉಕ್ಕಿತು ಅವಳಲ್ಲಿ. ಅವಳು ನಾರದನ ವೀಣಾಗಾನವನ್ನು ಕೇಳಿ ಆನಂದಿಸುತ್ತ, ಅವನಿಗೆ ಆದರದಿಂದ ಶುಶ್ರೂಷೆಗಳನ್ನು ಮಾಡುತ್ತಲೇ ಇದ್ದಳು. ತನ್ನ ಸೋದರಳಿಯನಾದ ಪರ್ವತನು ಹೊರಟು ಹೋದುದಕ್ಕೆ ನಾರದನಿಗೆ ತುಂಬಾ ಖೇದವೆನಿಸಿತು.

ಹೀಗಿರುವಾಗ ಸಂಜಯರಾಜನು ತನ್ನ ಕುಮಾರಿಗೆ ಸ್ವಯಂವರ ಮಾಡಬೇಕೆಂದು ನಿಶ್ಚಯಿಸಿ, ತನ್ನ ಮಂತ್ರಿಯೊಂದಿಗೆ, "ಮಗಳಿಗೆ ಮದುವೆಮಾಡಬೇಕು. ಅವಳ ಸೌಂದರ್ಯಕ್ಕೆ ತಕ್ಕ ಸೌಂದರ್ಯವೂ ಗುಣವೂ, ಕುಲವೂ ಕೂಡಿದವರನನ್ನು ಹುಡುಕಿರಿ" ಎಂದನು.

"ಮಹಾರಾಜರೇ. ನೀವು ಹೇಳುವಂತಹ ವರಂದಿರು ಅನೇಕಮಂದಿ ಇರುತ್ತಾರೆ. ಅವರಲ್ಲಿ ನಿಮಗೆ ಹಿಡಿಸಿದ ವರನಾರೆಂಬುದನ್ನು ನೀವೇ ನಿರ್ಣಯಿಸುವುದು ಒಳ್ಳೆಯದು." ಎಂದನು ಮಂತ್ರಿ.

ಮಂತ್ರಿಯ ಮಾತು ನಿಜವೇ. ತನಗೆ ಗೊತ್ತಿರುವ ವರಂದಿರು ಮಂತ್ರಿಗೂ ಗೊತ್ತಿದೆ. ಅವರಲ್ಲಿ ಯಾವನು ಯೋಗ್ಯನು?

ಹೀಗೆ ರಾಜನು ಮದುವೆಯ ಪ್ರಯತ್ನದಲ್ಲಿರುವುದು ಮದಯಂತಿಗೆ ತಿಳಿಯಿತು. ಮದಯಂತಿ ತನ್ನ ದಾದಿಯ ಮೂಲಕ, ತಾನು ನಾರದನನ್ನು ವರಿಸಿದ್ದೇನೆಂದೂ, ಇನ್ನೊಬ್ಬನನ್ನು ಮದುವೆಯಾಗಲಾರೆನೆಂದೂ, ವರಾನ್ವೇಷಣೆಯ ಶ್ರಮ ಬೇಡವೆಂದೂ ತಂದೆಗೆ ತಿಳಿಯಪಡಿಸಿದಳು.

ಮದಯಂತಿಯ ದಾದಿ ಹೋಗಿ ಸಂಜಯರಾಜನ ಹತ್ತಿರ ಆ ಸಂಗತಿಯನ್ನು ಹೇಳಿದಾಗ ಆತನ ಪತ್ನಿ ಕೈಕೇಯಿ ಕೂಡಾ ಅಲ್ಲಿದ್ದಳು. ರಾಜನು ಅವಳನ್ನು ನೋಡಿ, "ನಮ್ಮ ಹುಡುಗಿ ಆ ಕೋತಿ ಮೋರೆಯುವನನ್ನು ಹೇಗೆ ವರಿಸಿದಳು? ಅವನು ನಮ್ಮ ಮಗಳಿಗೆ ಯಾವ ರೀತಿಯಲ್ಲಿ ತಕ್ಕವನಾಗಬಲ್ಲನು? ಅವನಿಗೆ ಮಗಳನ್ನು ಕೊಡುವುದಾದರೂ ಹೇಗೆ? ಬುದ್ಧಿಯಿಲ್ಲದೆ ಸಣ್ಣ ಹುಡುಗಿ ತಪ್ಪು ನಿರ್ಣಯಮಾಡಿಬಿಟ್ಟರೆ ಅದನ್ನು ಸರಿತಿದ್ದಬೇಕಾದುದು ನಮ್ಮ ಕರ್ತವ್ಯ.



ಅವನೊಬ್ಬ ತಿರುಗೂಳಿಯಾದ ಭಿಕ್ಷುಕನೆಂಬುದನ್ನು ಮಗಳ ಮನಸ್ಸಿಗೆ ತಿಳಿಯುವಂತೆ ಹೇಳು. ಅವಳಿಗೆ ಹಿಡಿದ ಹುಚ್ಚನ್ನು ಬಿಡಿಸು" ಎಂದನು.

ಕೈಕೇಯಿ ಏಕಾಂತದಲ್ಲಿ ತನ್ನ ಮಗಳನ್ನು ನೋಡಿ, "ಅಮ್ಮಾ, ನೀನು ಜಗಜಗಿಸುವ ಮೃದು ಕೋಮಲ ಶರೀರದವಳು. ಆ ತಿರುಗೂಳಿ ನಾರದ ಧೂಳು ಮಣ್ಣು ಬಡಿದ ಮೊರಟು ಶರೀರದವನು. ನಿನ್ನ ಮುಖವೆಷ್ಟು ಸುಂದರ! ಅವನದು ಸಾಕ್ಷಾತ್ ಕೋತೀಮೂತಿ! ಅಂಥವನನ್ನು ಹೇಗಮ್ಮಾ ಮೆಚ್ಚಿದೆ? ಅದು ಹೋಗಲಿ. ಅವನು ಯಾವಾಗಲೂ ತಿರುಗಾಡುತ್ತಾ ಭಿಕ್ಷೆಯೆತ್ತಿ ಬದುಕಿಕೊಂಡಿರುತ್ತಾನೆ. ಇಂಥವನನ್ನೋ ನೀನು ವರಿಸುವುದು? ನಿನ್ನ ಈ ಬುದ್ಧಿಯಿಲ್ಲದ ಕೆಲಸ ನೋಡಿ ಅಪ್ಪ ಬಹಳ ನೊಂದುಕೊಂಡಿದ್ದಾರೆ. ಗೊತ್ತಾ? ಯಾರಾದರೂ ಎಳೆಯ ವೀಳ್ಯದೆಲೆಯನ್ನು ತೆಗೆದುಕೊಂಡು ಹೋಗಿ ಒಂಟೆಗೆ ತಿನ್ನಿಸುವರೇ? ನಿನ್ನನ್ನು ಆ ನಾರದನಿಗೆ ಕೊಟ್ಟು ಮದುವೆ ಮಾಡಿದರೆ ನಮ್ಮನ್ನು ನೋಡಿ ಎಲ್ಲರೂ ನಗಲಾರರೇ? ನಿನಗೆ ಹುಚ್ಚು ಹಿಡಿಯಿತೇನೋ ಎಂದು ಅನುಮಾನಿಸುವ ಕಾರ್ಯಮಾಡಬೇಡ. ಬಿಡಮ್ಮಾ ಈ ಯೋಚನೆ" ಎಂದು ಬಗೆಬಗೆಯಾಗಿ ಬೋಧಿಸಿದಳು.

ಆದರೆ ಸಂಗೀತ ವ್ಯಾಮೋಹ ತುಂಬಿದವಳಾದ ಮದಯಂತಿ, ತನ್ನ ಮನಸ್ಸನ್ನು ಸ್ವಲ್ಪವೂ ಚಂಚಲಗೊಳಿಸದೆ, "ಅಮ್ಮಾ, ಮನುಷ್ಯನು ಕೇವಲ ಶುಂಠನಾಗಿದ್ದರೆ ಅವನ ಮುಖವೂ ಮೂಗೂ ಚೆನ್ನಾಗಿದ್ದು, ದೊಡ್ಡ ರಾಜ್ಯವೂ ಧನವೂ ಬೇಕಾದಷ್ಟಿದ್ದು ಏನು ಲಾಭ ಹೇಳು? ಈ ನಾರದನಂತಹ ಸಂಗೀತ ಪ್ರವೀಣನಿಗೆ ಮುಖವೂ, ರಾಜ್ಯವೂ, ಧನವೂ ಏತಕ್ಕೆ ಬೇಕು? ಈತನ ಗಾನರಸ ಹರಡಿಬಿಟ್ಟರೆ ಜಿಂಕೆಗಳೂ, ಪಕ್ಷಿಗಳೂ ಪರವಶವಾಗುತ್ತವೆ. ಇವನಂತಹ ಗಾಯಕನು ಮೂರು ಲೋಕಗಳಲ್ಲಿಯೂ ಇನ್ನೊಬ್ಬನಿಲ್ಲ. ರಸಜ್ಞತೆ ಇಲ್ಲದವನನ್ನು ಮದುವೆಮಾಡಿಕೊಂಡರೆ ಪ್ರತಿಕ್ಷಣವೂ ಸಾವಿಗೆ ಸಮಾನವಾಗಿರುತ್ತೆ. ರಸಜ್ಞನಾದವನ ಪತ್ನಿಯಾದರೆ ಜೀವಿತವಷ್ಟೂ ಆನಂದವೇ! ಸರ್ವಜ್ಞಾನಿಯಾದವನು ಸಾಧಾರಣ ಮನುಷ್ಯನಾದರೂ ದೇವತೆಗಳಿಗೆ ಸಮಾನನಲ್ಲವೇನಮ್ಮಾ? ಪಶುಪಕ್ಷಿಗಳನ್ನು ಕೂಡಾ ಆನಂದದಲ್ಲಿ ಓಲಾಡಿಸುವಂತಹ ಸಂಗೀತವನ್ನು ಆಸ್ವಾದಿಸುವುದೆಂದರೆ ಯಾರಿಗೆತಾನೇ ಬೇಡಾದೀತು? ಇದನ್ನು ಹಿರಿಯರು ಅನಾದರಿಸುವರಾದರೆ ಅವರ ಜನ್ಮ ಎಂತಹ ಜನ್ಮವೋ? ನಾರದನ ಶಕ್ತಿ ಅಪ್ಪನಿಗೆ ತಿಳಿಯದು. ಶಾಪದಿಂದ ಅವನಿಗೆ ವಾನರ ಮುಖವು ಬರುವುದಕ್ಕೆ ಮೊದಲು, ಅವನು ಚೆನ್ನಾಗಿರಲಿಲ್ಲವೇ? ದೇವತೆಗಳಿಗೆ ಸಮಾನನಾಗಿರಲಿಲ್ಲವೆ? ಆಗಿನಿಂದಲೇ ನಾನು ಅವನನ್ನು ಪ್ರೇಮಿಸಿಕೊಂಡು ಬಂದಿದ್ದೇನಮ್ಮಾ. ಈಗ ಕೋತಿಯ ಮುಖವಾದರೇನು? ಆತನ ಶಾಪದಲ್ಲಿ ನಾನೂ ಸಹ ಭಾಗಿನಿಯೆಂದೇ ತಿಳಿದಿದ್ದೇನೆ.



ಆತನೇ ನನ್ನ ಪ್ರಿಯನೂ ಪತಿಯೂ ಎಲ್ಲವೂ! ಕಿನ್ನರರ ಮುಖವು ಕುದುರೆಗಳ ಮುಖಗಳಾಗಿಲ್ಲವೆ? ಆದಕ್ಕಾಗಿ ಅವರ ಗಾನವನ್ನು ಆದರಿಸದಿರುವವರು ಯಾರಾದರೂ ಇದ್ದಾರೆಯೇ? ವಿದ್ಯೆಗಳೇನೂ ಇಲ್ಲದವನಿಗೆ ಸುಂದರವಾದ ಮುಖವೇತಕ್ಕೆ? ನಾರದನನ್ನು ಹೊರತು ನವ ಮನ್ಮಥನನ್ನಾದರೂ ನಾನು ಮದುವೆಯಾಗಲಾರೆ. ನನ್ನನ್ನು ಅವನಿಗೇ ಕೊಟ್ಟು ಮದುವೆ ಮಾಡಿಸು ಅಮ್ಮಾ. ಇದೇ ನನ್ನ ನಿರ್ಧಾರ! ಅದಕ್ಕೆ ತಂದೆಯನ್ನು ಒಪ್ಪಿಸುವುದು ನಿನ್ನದೇ ಭಾರ." ಎಂದಳು.

ಇಷ್ಟಾದ ಮೇಲೆ, ಕೈಕೇಯಿ ಏನೂ ಹೇಳಲು ತೋರದೆ ಗಂಡನ ಬಳಿಗೆ ಹೋಗಿ, ಕುಮಾರಿಯ ನಿಶ್ಚಯವನ್ನು ತಿಳಿಸಿದಳು. ರಾಜನು ಮತ್ತೇನೂ ಅಭ್ಯಂತರ ಹೇಳದೆ ಮದುವೆಯ ಪ್ರಯತ್ನಕ್ಕೆ ಪ್ರಾರಂಭಿಸಿದನು. ಒಂದು ಶುಭದಿನದಲ್ಲಿ ನಾರದ ಮದಯಂತಿಯರ ಮದುವೆಯೂ ಆಯಿತು.

ನಾರದನು ಮಾವಯ್ಯನ ಮನೆಯಲ್ಲಿಯೇ ಸಂತೋಷವಾಗಿದ್ದನು. ಹೆಂಡತಿ ಸಮೀಪವಿರುವಾಗಲೆಲ್ಲಾ ಅವನಿಗೆ ತನ್ನ ಕೋತಿ ಮುಖವನ್ನು ನೆನೆದು ತುಂಬಾ ವ್ಯಥೆಯಾಗುತ್ತಿತ್ತು. ಆದರೆ ಮದಯಂತಿ ಆದಕ್ಕಾಗಿ ಸ್ವಲ್ಪವೂ ಚಿಂತಿಸುತ್ತಿರಲಿಲ್ಲ.

ಸ್ವಲ್ಪ ಕಾಲ ಕಳೆಯಿತು. ಅಷ್ಟರಲ್ಲಿ ಪರ್ವತ ಮುನಿ ಎಲ್ಲೆಲ್ಲೋ ತಿರುಗಿ ನಾರದನನ್ನು ನೋಡಲು ಬಂದನು. ಅವನು ತನ್ನಿಂದ ತನ್ನ ಸೋದರ ಮಾವನ ಮುಖ ಕೋತಿಯಂತಾದುದನ್ನು ನೆನೆದು ನೊಂದುಕೊಂಡು, "ರಾಜಕುಮಾರಿಗಾಗಿ ನನ್ನ ಶಾಪವನ್ನು ಹಿಂದೆಗೆದುಕೊಳ್ಳುತ್ತೇನೆ. ನಿನ್ನ ಮುಖ ಮೊದಲಿನಂತಾಗಲಿ!" ಎಂದನು.

"ನಾನು ಕೂಡಾ ಹಿಂದುಮುಂದು ಯೋಚನೆಯಿಲ್ಲದೆ ನಿನ್ನನ್ನು ಶಪಿಸಿಬಿಟ್ಟೆನು. ನನ್ನ ಶಾಪವನ್ನೂ ಹಿಂದೆಗೆದುಕೊಳ್ಳುತ್ತೇನೆ. ನೀನು ಎಂದಿನಂತ ಸ್ವರ್ಗಕ್ಕೆ ಹೋಗು" ಎಂದು ನಾರದನು ಪರ್ವತನಿಗೆ ಹೇಳಿದನು.

ನಾರದನು ಎಂದಿನಂತಾದುದನ್ನು ನೋಡಿ ಮದಯಂತಿ ಅತ್ಯಾನಂದದಿಂದ ತಾಯಿಯ ಬಳಿಗೆ ಹೋಗಿ ತನ್ನ ಗಂಡನ ಮುಖವು ಸರಿಯಾಯಿತೆಂದು ಹೇಳಿದಳು. ಅವಳು ಈ ಮಾತನ್ನು ರಾಜನೊಂದಿಗೆ ಹೇಳಿ ಅವನನ್ನೂ ಸಂತೋಷಪಡಿಸಿದಳು.

ಈ ವಿಧವಾಗಿ ನಾರದನು ಸಂಸಾರದ ಮಾಯೆಯಲ್ಲಿ ಸಿಕ್ಕಿ, ಸುಖದುಃಖ, ಕೋಪ, ತಾಪಗಳಿಗೆ ಗುರಿಯಾದನು. ನಾರದನು ವ್ಯಾಸನೊಂದಿಗೆ ತನ್ನ ಇನ್ನೊಂದು ಅನುಭವವನ್ನು ಕೂಡಾ ಹೇಳಿದನು. ಅದೇನೆಂದರೆ,

ಒಂದು ಸಾರಿ ನಾರದನು ಪಾಲ್ಗಡಲಿನಲ್ಲಿರುವ ಶ್ವೇತದ್ವೀಪಕ್ಕೆ ಹೋಗಿ ಮಹಾವಿಷ್ಣುವಿನ ದರ್ಶನ ಮಾಡಿದನು. ನಾರದನನ್ನು ನೋಡಿದ ಕೂಡಲೇ ಲಕ್ಷ್ಮೀದೇವಿ ತಟ್ಟನೆದ್ದು ಒಳಗೆ ಹೊರಟುಹೋದಳು. ಇದನ್ನು ನೋಡಿ ನಾರದನು ನೊಂದುಕೊಂಡು

ವಿಷ್ಣುವಿನೊಂದಿಗೆ "ನಾನೇನು ಪರಕೀಯನೆ? ದುಷ್ಟನೇ? ತಪಸ್ವಿಯಾದ ನನ್ನನ್ನು ನೋಡಿ ಲಕ್ಷ್ಮೀದೇವಿ ಹಾಗೇಕೆ ಹೋಗಬೇಕು? ಇದೇನಾದರೂ ಮರ್ಯಾದೆಯಾಗಿರುತ್ತದೆಯೇ?" ಎಂದು ಪ್ರಶ್ನೆ ಮಾಡಿದನು.

ಅತಿಶಯವನ್ನು ನೋಡಿದವನಂತೆ ನಾರದನು ಹೀಗೆ ಕೇಳಿದುದಕ್ಕೆ ವಿಷ್ಣು ಕೋಪಿಸದೆ, "ಆದರಲ್ಲಿ ಅಂತಹ ಅತಿಶಯವೇನಿದೆ? ಗಂಡನ ಹೊರತು ಬೇರೆಯವರ ಇದಿರಿನಲ್ಲಿ ಇರಬಾರದೆಂಬುದು ಸ್ತ್ರೀಧರ್ಮ. ಎಂತೆಂತಹ ತಪಸ್ವಿಗಳು ಕೂಡಾ ಇಂದ್ರಿಯಗಳಿಗೆ ಅಧೀನರೇ ಅಲ್ಲವೇನು? ಅವುಗಳನ್ನು ದೂರಪಡಿಸಲು ಎಂತೆಂತಹ ಮಹಾಮಹಿಮರಿಗೂ ಸಹ ಸಾಧ್ಯವಾಗಿಲ್ಲ. ಹೆಚ್ಚೇಕೆ? ನಾವು ತ್ರಿಮೂರ್ತಿಗಳೂ ಸಹ ಮಾಯಕ್ಕೆ ಒಳಪಟ್ಟವರೇ!" ಎಂದನು.

ನಾರದನಿಗೆ ಆಶ್ಚರ್ಯವಾಯಿತು. "ಮಾಯದ ಬಲವು ಅಷ್ಟರಮಟ್ಟಿಗಿದೆಯೆ?" ಎಂದನು.

"ನಿನಗೆ ಗೊತ್ತಿಲ್ಲವೆಂದಾಯಿತು. ನೋಡಬೇಕೆಂದಿದ್ದರೆ ನನ್ನೊಂದಿಗೆ ಬಾ, ತೋರಿಸುತ್ತೇನೆ. ನೋಡಿದ ಮೇಲೆ ದುಃಖ ಪಡಬಾರದು" ಎಂದು ಹೇಳಿ ವಿಷ್ಣು ಗರುತ್ಮಂತನನ್ನು ಕರೆದನು. ನಾರದನನ್ನೂ ತನ್ನೊಂದಿಗೆ ಗರುತ್ಮಂತನ ಮೇಲೆ ಕೂಡಿಸಿಕೊಂಡು ವಿಷ್ಣು ಎಲ್ಲಿಗೋ ಹೊರಟನು. ಕಾನ್ಯಕುಬ್ಜವೆಂಬ ಊರಿನ ಸಮೀಪದಲ್ಲಿದ್ದ ಸುಂದರವಾದೊಂದು ಕೊಳದ ಸಮೀಪದಲ್ಲಿ ವಿಷ್ಣು ನಾರದರು ಕೆಳಗಿಳಿದರು. ಸರೋವರದಲ್ಲಿ ಸುಂದರವಾದ ತಾವರೆ ಹೂವುಗಳೂ ಅರಳಿದ್ದುವು. ನೀರು ಸ್ಫಟಿಕದಂತೆ ನಿರ್ಮಲವಾಗಿತ್ತು.

ವಿಷ್ಣು ನಾರದನ ಕಿರುಬೆರಳನ್ನು ಹಿಡಿದುಕೊಂಡು, "ಇದರಲ್ಲಿ ಸ್ನಾನಮಾಡು. ಆ ಮೇಲೆ ಕಾನ್ಯಕುಬ್ಜ ನಗರಕ್ಕೆ ಹೋಗೋಣ." ಎಂದನು.

ನಾರದನು ತನ್ನ ವೀಣೆಯನ್ನೂ, ಕೃಷ್ಣಾಜಿನವನ್ನೂ ಒಂದು ಕಡೆಯಲ್ಲಿಟ್ಟು, ಕೊಳದಲ್ಲಿಳಿದು



ಮುಳುಗಿ ಏಳುವಾಗ ಅವನು ಹೆಣ್ಣಾಗಿ ಮಾರ್ಪಟ್ಟಿದ್ದನು. ತಾನು ಹೊಸತಾಗಿ ಹೆಣ್ಣಾದೆನೆಂಬ ಸಂಗತಿಯನ್ನು ತಿಳಿಯದೆ ನಾರದನು ಉತ್ಸಾಹದಿಂದ ಜಲಕ್ರೀಡೆಯಾಡಿದನು. ಅವನ ವೀಣೆಯನ್ನೂ ಕೃಷ್ಣಾಜಿನವನ್ನೂ ತೆಗೆದುಕೊಂಡು ವಿಷ್ಣು ಗರುತ್ಮಂತನ ಮೇಲೇರಿ ಹೊರಟುಹೋಗಿಬಿಟ್ಟನು.

ನಾರದನು ಸ್ತ್ರೀರೂಪದಲ್ಲಿ ಕೊಳದಿಂದ ಮೇಲೆ ಬಂದಾಗಲೂ ತನ್ನ ವೀಣೆ ವಿಷ್ಣು ಮುಂತಾದ ನೆನಪೇ ಅವನಿಗಿಲ್ಲ. ಆಗ ರಥದ ಮೇಲೆ ಕಾಲಧ್ವಜನೆಂಬ ರಾಜನು, ಆನೆ ಕುದುರೆ ಕಾಲಾಳುಗಳ ಗುಂಪಿನೊಂದಿಗೆ ಅಲ್ಲಿಗೆ ಬಂದು, ನಾರದನನ್ನು ಅತ್ಯಾಸಕ್ತಿಯಿಂದ ನೋಡುತ್ತ, "ನೀನು ಯಾವ ನದೀ ಸುಂದರಿ? ಅಥವಾ ದೇವಸುಂದರಿಯೋ? ನಾಗಸುಂದರಿಯೋ? ಇಲ್ಲಿ ಒಬ್ಬಳೇ ಇರಲು ಕಾರಣವೇನು?" ಎಂದು ಕೇಳಿದನು. ನಾರದನು ಲಜ್ಜಿತನಾಗಿ ಸುಮ್ಮನಿದ್ದನು. "ನೀನು ಯಾರೇ ಆಗಿರು. ನನಗೆ ತಕ್ಕ ಮಹಿಮೆ

ಯುಳ್ಳವಳೇ. ನನ್ನನ್ನು ಮದುವೆಯಾಗುವೆಯಾ?" ಎಂದು ಕೇಳಿದನು ರಾಜ. ಅದಕ್ಕೆ ನಾರದನು ತಲೆ ಯೊಲಿಯುಲು ಇಬ್ಬರೂ ಮದುವೆ ಮಾಡಿಕೊಂಡರು.

ನಾರದನಲ್ಲಿ ಪುರುಷಭಾವವಿರಲೇ ಇಲ್ಲ. ಬ್ರಹ್ಮ ಜ್ಞಾನ ಅದಕ್ಕಿಂತ ಮೇಲೆ ಇಲ್ಲ. ತನ್ನ ಸೌಂದರ್ಯಕ್ಕೆ ಯಾರೂ ಈಡು ಜೋಡು ಇಲ್ಲವೆಂಬ ಗರ್ವಕೂಡಾ ಅವನಿಗೆ ಬಂತು. ನಾರದನು ಹನ್ನೆರಡು ವರ್ಷ ಆ ರಾಜನೊಂದಿಗಿದ್ದು, ಆ ಮೇಲೆ ಗರ್ಭಧರಿಸಿ, ಪುತ್ರ ನನ್ನು ಹೆತ್ತನು. ಮಗನಿಗೆ ವೀರವರ್ಮನೆಂದು ಹೆಸರಿಟ್ಟರು. ಆ ಮೇಲೆ ನಾರದನು ವರಿಸೆಯಾಗಿ ಪುತ್ರರನ್ನೇ ಹೆತ್ತನು. ಅವನಿಗೆ ಹನ್ನೆರಡು ಮಂದಿ ಮಕ್ಕಳಾದರು. ಆ ಮಕ್ಕಳು ದೊಡ್ಡವರಾಗಿ ಮದುವೆ ಮಾಡಿಕೊಂಡು ತಾವೂ ಮಕ್ಕಳ ತಂದೆಯಾದರು. ವಂಶವು ವಿಸ್ತರಿಸಿಕೊಂಡು ಹೋಯಿತು.

ಮತ್ತೆ ಸ್ವಲ್ಪ ಕಾಲಕಳೆಯಲು ಕಾನ್ಯಕುಬ್ಜ ನಗರದ ಮೇಲೆ ಶತ್ರುಗಳು ದಂಡೆತ್ತಿ ಯುದ್ಧಕ್ಕೆ ಬಂದರು. ಆ ಯುದ್ಧದಲ್ಲಿ ನಾರದನು ಹಡೆದ ಪುತ್ರರೂ, ಅವರ ಕುಮಾರರೂ ಎಲ್ಲರೂ ಸತ್ತರು. ನಾರದನಿಗೆ ತೀರದ ಗರ್ಭಶೋಕವೇ ಸಂಪ್ರಾಪ್ತವಾಯಿತು. ರಾಜನೂ ದುಃಖಿಸಿದನು.

ಆ ಸಮಯದಲ್ಲಿ ವಿಷ್ಣು ಮುದುಕ ಬ್ರಾಹ್ಮಣನ ರೂಪದಲ್ಲಿ ಬಂದು ನಾರದನ ಕಿವಿಗೆ ಬೀಳುವಂತೆ, "ಯಾರು ಪುತ್ರರು? ಯಾರು ಬಂಧುಗಳು? ಅಸಲು ನೀನು ಯಾರು? ಎಲ್ಲಿಂದ ಬಂದೆ? ಕಾಲವಶ ದಿಂದ ಎಲ್ಲವೂ ಆಗುತ್ತವೆ, ಹೋಗುತ್ತವೆ. ಮೊದಲು ಸ್ನಾನಮಾಡಿ ಕಾಲನಾದ ಯಮನಿಗೆ ತರ್ಪಣ ಬಿಡು." ಎಂದು ಹೇಳಿದನು.

ಅವನು ನಾರದನನ್ನು ಮಾತ್ರ ತನ್ನೊಂದಿಗೆ ಪುರುಷ ತೀರ್ಥವೆಂಬ ಸರಸ್ಸಿಗೆ ಕರೆದುಕೊಂಡು ಹೋಗಿ ಅದರಲ್ಲಿ ಇಳಿದು ಸ್ನಾನಮಾಡಲು ಹೇಳಿದನು ಅದರಲ್ಲಿ ಮುಳುಗಿದ ಕೂಡಲೇ ನಾರದನ ಸ್ತ್ರೀ ರೂಪವು ಹೋಗಿ ಮೊದಲಿನ ನಾರದನೇ ಆದನು. ತೀರದಲ್ಲಿ ವೀಣೆಯನ್ನೂ, ಕೃಷ್ಣಾ ಜಿನವನ್ನೂ ಹಿಡಿದು ಕೊಂಡು ನಿಂತ ವಿಷ್ಣು, ನಾರದನನ್ನು ನೋಡಿ, "ಎಷ್ಟು ಹೊತ್ತು ನಾರದಾ? ಬೇಗ ಬಾ!" ಎಂದನು.

ಆಗ ನಾರದನಿಗೆ ತಾನು ಸ್ತ್ರೀಯಾಗಿದ್ದೆನೆಂಬ ವಿಷಯವಷ್ಟೂ ಮರೆತು ಹೋಗಿತ್ತು. ತನ್ನ ಸುಂದರ ಪತ್ನಿ ತನ್ನೊಂದಿಗೆ ಏನೂ ಹೇಳದೆ ಯಾವ ನೊಂದಿಗೋ, ಪುರುಷನಾಗಿ ಹೋದನೆಂಬ ಸಂಗತಿ ತಿಳಿದು ತಾಲಧ್ವಜರಾಜನು ತುಂಬಾ ದುಃಖಿಸಿದನು. ವಿಷ್ಣು ಆ ರಾಜನಿಗೆ ವೇದಾಂತವನ್ನು ಬೋಧಿಸಿ ಕಳುಹಿಸಿ ಕೊಟ್ಟನು. ಮಾಯೆಯ ಕೈಯಲ್ಲಿ ಮನುಷ್ಯನು ಹೇಗೆ ಕೀಲುಬೊಂಬೆಯಾಗುವನೆಂದು ನಾರದನಿಗೆ ವಿಷ್ಣುವಿನಿಂದ ಗೊತ್ತಾಯಿತು.



# ಸವತಿಗಳ ಜಗಳ

ಮುತ್ತಯ್ಯನೆಂಬ ವ್ಯಾಪಾರಿಗೆ ಇಬ್ಬರು ಹೆಂಡತಿಯರು. ಇಬ್ಬರೂ ಯಾವಾಗಲೂ ಒಬ್ಬರಮೇಲೊಬ್ಬರು ಜಗಳ ಮಾಡಿಕೊಂಡೇ ಇರುವರು.

ಇದನ್ನು ತಾಳಲಾರದೆ ಮುತ್ತಯ್ಯ ಒಬ್ಬ ಸ್ನೇಹಿತನ ಸಲಹೆಯಂತೆ ಒಂದು ಉಪಾಯಮಾಡಿದನು.

ಒಂದುದಿನ ಸಾಯಂಕಾಲ ಅವನು ತನ್ನ ಹೆಂಡಂದಿರೊಂದಿಗೆ, ತಾನು ವ್ಯಾಪಾರದ ನಿಮಿತ್ತ ಪಕ್ಕದ ಊರಿಗೆ ಹೋಗುವೆನೆಂದು ಹೇಳಿ ಸತ್ರದಲ್ಲಿ ಅಡಗಿದ್ದು, ಆ ರಾತ್ರಿ ಭಯಂಕರವಾದ ವೇಷ ಹಾಕಿಕೊಂಡು ಕಳ್ಳನ ಹಾಗೆ ಮನೆಗೆ ಬಂದು ಬಾಗಿಲು ತಟ್ಟಿದನು.

ಅವನ ಹೆಂಡಂದಿರಿಬ್ಬರೂ ಕಿಟಕಿಯಿಂದ ಅವನನ್ನು ನೋಡಿ ಹೆದರಿ "ಅಯ್ಯೊ! ಅಮ್ಮೋ!" ಎಂದು ಕೆಟ್ಟದನಿಯಿಂದ ಕೂಗಿದರು.

"ನನಗೆ ಭಯವಾಗಿದೆ ಅಕ್ಕಾ!" ಎಂದಳು ಚಿಕ್ಕಹೆಂಡತಿ ಸವತಿಯನ್ನು ಬಾಚಿ ತಬ್ಬಿಕೊಂಡು.

"ಹೆದರಬೇಡ್ವೇ ಹುಚ್ಚೀ!" ಎಂದು ದೊಡ್ಡವಳು ಚಿಕ್ಕವಳ ಬೆನ್ನು ತಡವಿ ಸಮಜಾಯಿಸಿದಳು.

"ಬಾಗಿಲು ತೆರೀತೀರಾ, ಒಡೆಯಲೆ?" ಎಂದು ಮುತ್ತಯ್ಯ ಕರ್ಕಶವಾಗಿ ಕೂಗಿ ಕೇಳಿದ.

ಸವತಿಗಳಿಬ್ಬರೂ ಗುಟ್ಟು ಮಾತಾಡಿಕೊಂಡು ಕೈಯಲ್ಲೊಂದೊಂದು ಒನಕೆ ಹಿಡಿದುಕೊಂಡು ಧೈರ್ಯದಿಂದ ಬಾಗಿಲು ತೆರೆದು, "ಯಾರೋ ನೀನೂ?" ಎಂದು ಕೂಗುತ್ತಾ ಹೊರಗೆ ಬಂದರು. ಮುತ್ತಯ್ಯ ಓಡಿ ಹೋಗುತ್ತ ನೂರು ರೂಪಾಯಿಯ ಚೀಲವನ್ನು ಅಲ್ಲೇ ಜಾರ ಬಿಟ್ಟನು. ಸಖ್ಯತೆಯಿಂದಿದ್ದರೆ ಲಾಭವಿದೆ ಎಂಬುದನ್ನು ತನ್ನ ಹೆಂಡಂದಿರಿಗೆ ತಿಳಿಸಲಿಕ್ಕಾಗಿಯೇ ಅವನು ಹಾಗೆ ಮಾಡಿದನು.

ಆದರೆ ಮರುದಿನ ಅವನು ಮನೆಗೆ ಬಂದಾಗ, ಅವನ ಹೆಂಡಂದಿರಿಬ್ಬರೂ, "ನನ್ನನ್ನು ನೋಡಿಯೇ ಕಳ್ಳ ಓಡಿದ್ದು. ನನಗೇ ಈ ಹಣ!" ಎಂದು ಒಬ್ಬಳ ಮೇಲೊಬ್ಬಳು ಉರಿದುರಿದು ಬೀಳುತ್ತಿದ್ದಳು. ಇಬ್ಬರೂ ಒಂದೇ.





# ಸುಳ್ಳನ್ನು ಗೆದ್ದ ಸುಳ್ಳು

**ಒಂ**ದು ಕಾಲದಲ್ಲಿ ಧರ್ಮಾವರವೆಂಬ ಊರಿಗೆ ದೂರವಾಗಿ ಒಂದು ಪಾಳುಬಿದ್ದ ಮನೆ ಇದ್ದಿತು. ಆ ಮನೆಯ ಮುಂದೆ ದೊಡ್ಡದೊಂದು ಗೋಳೀ ಮರವಿದ್ದಿತು. ಹಗಲು ಹೊತ್ತಿನಲ್ಲಿ ದಾರೀ ಹೋಕರು ಆ ಮರದ ಸೊಗಸಾದ ನೆರಳಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳುವರು. ಸಾಯಂಕಾಲವಾಯಿತೆಂದರೆ ಅಲ್ಲಿಂದ ಬೇಗ ಬೇಗನೆ ಹೋಗಿ ಬಿಡುವರು. ಕತ್ತಲೆಬಿದ್ದ ಮೇಲಂತೂ ಆ ದಿಕ್ಕಿಗೆ ಯಾವ ನರಪ್ರಾಣಿಯೂ ಬರುವುದಿಲ್ಲ. ಕಾರಣವೇನೆಂದರೆ, ಆ ಪಾಳುಬಿದ್ದ ಮನೆಯಲ್ಲಿ ಮೋಹಿನೀ ಪಿಶಾಚಿಗಳು ರಾತ್ರಿಯಲ್ಲಿ ಆಟವಾಡಿಕೊಂಡಿರುತ್ತವಂತೆ. ಆ ಮನೆಯೊಳಗಿನಿಂದ ಗೆಜ್ಜೆಗಳ ಸಪ್ಪಳವೂ ಬಳೆಗಳ ಕಣಕಣಾಟವೂ ಹೊರಡುವುದನ್ನು ಕೇಳಿದ್ದಾರೆ. ಅದು ಮೋಹಿನೀ ಪಿಶಾಚಿಗಳೆಂದು ಬಲ್ಲವರು ಹೇಳಿದ್ದಾರೆ. ಉಳಿದವರು ನಂಬಿದ್ದಾರೆ.

ಆ ಮೋಹಿನೀ ಪಿಶಾಚಿಗಳ ಗುಟ್ಟನ್ನು ಪೂರ್ತಿಯಾಗಿ ಕಂಡುಹಿಡಿಯಬೇಕೆಂದು ಧರ್ಮಾವರದ ಮೂವರು ಯುವಕರು ಒಂದುದಿನ ರಾತ್ರಿ ಧೈರ್ಯದಿಂದ ಆ ಪಾಳು ಮನೆಯೊಳಗೆ ಪ್ರವೇಶಿಸಿದರು. ಆಮೇಲೆ ಸಾಯುವ ಹಾಗೆ ಪೆಟ್ಟುಗಳನ್ನು ತಿಂದು ಕುಯ್ಯೋ ಮುಯ್ಯೋ ಎಂದು ಕೂಗುತ್ತ ಹೇಗೋ ಹೊರಗೆ ಓಡಿ ಬದುಕಿ ಉಳಿದರು.

ಧರ್ಮಾವರದ ಮೋಹಿನೀ ಪಿಶಾಚಿಗಳ ಮಹಿಮೆ ಸಮೀಪದ ಪಟ್ಟಣದಲ್ಲಿಯೂ ಹರಡಿತು. ಪಟ್ಟಣದಿಂದ ಪರಶಿವನೆಂಬ ಯುವಕನು ಧರ್ಮಾವರಕ್ಕೆ ಬಂದು ಕತ್ತಲೆಯಾದ ಮೇಲೆ ಆ ಪಾಳು ಮನೆಯ ಮುಂದಿನ ಗೋಳೀ ಮರದ ಮೇಲೆ ಇಡೀ ರಾತ್ರಿ ಕುಳಿತನು. ರಾತ್ರಿಯಲ್ಲಿ ಪಾಳುಮನೆಯೊಳಗಿನಿಂದ ಆಗಾಗ ಬಳೆಗಳ ಕಣಕಣಾಟವೂ, ಗೆಜ್ಜೆಗಳ ನಿನಾದವೂ ಹೊರಡುವುದನ್ನು ಕೇಳಿದನು. ಇಳಿದು ಹೋಗಿ ನೋಡದೆ, ಬೆಳಗಾದ ಮೇಲೆ ಮರದಿಂದಿಳಿದು ಪಟ್ಟಣಕ್ಕೆ ಹೋದನು.

ಮುಂದೆ ಹತ್ತು ದಿನಗಳ ಮೇಲೆ ಧರ್ಮಾವರ ಗ್ರಾಮಕ್ಕೆ ಒಂದು ಬೊಂಬೆಯಾಟದ ಬೃಂದವು ಬಂದಿತು. ಅವರಲ್ಲಿ ಗಂಡುಸರೂ ಹೆಂಗುಸರೂ ಒಟ್ಟು ಹತ್ತು ಮಂದಿ ಇದ್ದರು. ಅವರು ಊರಿನ ಹಿರಿಯರನ್ನು ನೋಡಿ, ಆ ರಾತ್ರಿ ಊರ ಹೊರಗೆ ಗೋಳೀ ಮರದ ವಠಾರದಲ್ಲಿ ಬೊಂಬೆಯಾಟದ

**ಆರ್. ಎಸ್. ಎನ್. ಮೂರ್ತಿ**

ಪ್ರದರ್ಶನ ಕೊಡಲಿರುವ ತಮ್ಮ ನಿಶ್ಚಯವನ್ನು ತಿಳಿಸಿದರು. ಕೆಲವು ಮಂದಿ ಹಿರಿಯರು ಅಲ್ಲಿ ಮೋಹಿನೀ ಪಿಶಾಚಿಗಳು ಇರುತ್ತವೆಂದೂ, ಅಲ್ಲಿ ಪ್ರದರ್ಶನ ಬೇಡವೆಂದೂ ಹೇಳಿದರು.

"ನಮ್ಮ ಬೊಂಬೆಗಳಲ್ಲಿ ಆಂಜನೇಯಸ್ವಾಮಿ ಇದ್ದಾನೆ. ಅವನು ತೆರೆಯ ಮೇಲೆ ಇರುವಷ್ಟು ಹೊತ್ತು ಯಾವ ಮೋಹಿನಿ, ಶಾಕಿನಿ, ಢಾಕಿನಿಗಳಿಂದಾಗಲೀ, ಭೂತ ಪ್ರೇತ ಪಿಶಾಚಿಗಳಿಂದಾಗಲೀ ಭಯವಿಲ್ಲ. ಅವುಗಳ ಆಟ ಸಾಗದು" ಎಂದರು ಬೊಂಬೆಯಾಟದವರು. ಆದರೂ ಕೆಲ ಮಂದಿ ಹಿರಿಯರು ಅವರು ಅಲ್ಲಿ ಆಟ ತೋರಿಸುವ ನಿರ್ಣಯವನ್ನು ಬಲವಾಗಿ ಆಕ್ಷೇಪಿಸಿದರು.

"ಯಾರು ಬರಲಿ, ಬಾರದಿರಲಿ. ನಾವು ಮಾತ್ರ ಅಲ್ಲಿಯೇ ನಮ್ಮ ಬೊಂಬೆಯಾಟ ಆಡಿಸುತ್ತೇವೆ" ಎಂದನು ಬೊಂಬೆಯಾಟದವರ ಹಿರಿಯ.

ಆ ಸಾಯಂಕಾಲ ಗೋಳೀ ಮರದ ವಠಾರದಲ್ಲಿ ತಮಗೆ ಬೇಕಾದ ಏರ್ಪಾಡುಗಳನ್ನೆಲ್ಲಾ ಪೂರ್ತಿ ಮಾಡಿಕೊಂಡು, ರಾತ್ರಿ ಸ್ವಲ್ಪ ಹೊತ್ತು ಕಳೆದ ಮೇಲೆ, ಬೊಂಬೆಯಾಟದವರು ತಮ್ಮ ಆಟವನ್ನು ಪ್ರಾರಂಭಿಸಿದರು. ಧೈರ್ಯವಿದ್ದ ಊರೊಳಗಿನ ಕೆಲವರು ಬಂದು ಆಟ ನೋಡಲು ಕುಳಿತರು.

ಆಟ ಪ್ರಾರಂಭವಾದ ಸ್ವಲ್ಪ ಹೊತ್ತಿನ ಮೇಲೆ ಎಲ್ಲಿಂದಲೋ ಎಲುವಿನ ತುಂಡುಗಳು ಬಂದು ಬಿದ್ದುವು. ಆಗ ಪ್ರೇಕ್ಷಕರಲ್ಲಿ ಕೆಲವರು ಹೆದರಿ ಎದ್ದು ಓಡಿಹೋದರು. "ಅಯ್ಯಮ್ಮೋ! ಪಿಶಾಚಿಗಳು! ಮೋಹಿನೀ ಪಿಶಾಚಿಯಪ್ಪೋ!" ಎಂದು ಅವರು ಕೂಗಿದ್ದು ಕೇಳಿ ಉಳಿದ ಪ್ರೇಕ್ಷಕರು ಕೂಡಾ ಓಡಿಹೋದರು.

ಇದನ್ನು ನೋಡಿ ಆಟಗಾರರು ತೆರೆಯ ಮೇಲೆ ಆಂಜನೇಯನ ಬೊಂಬೆಯನ್ನು ಬರಮಾಡಿ ಆಡಿಸತೊಡಗಿದರು. ಆದರೂ ಎಲುವುಗಳು ಬಂದು



ಬೀಳುವುದು ನಿಲ್ಲಲಿಲ್ಲ. ಬೊಂಬೆಯಾಟದ ಹತ್ತು ಮಂದಿಗಳೂ ಒಂದೇ ಗುಂಪಾಗಿ ಕೂಡಿ, "ಇವು ಭಯಪಡಿಸುವ ಪಿಶಾಚಿಗಳೇ ಹೊರತು ಭಯಪಡುವ ಪಿಶಾಚಿಗಳಲ್ಲ! ಕಳ್ಳ ಪಿಶಾಚಿಗಳು!" ಎಂದು ತಮ್ಮೊಳಗೆ ಅಂದುಕೊಂಡರು.

ಅಷ್ಟರಲ್ಲಿ ಅವರಿಗೆ ಪಾಳುಬಿದ್ದ ಮನೆಯೊಳಗಿನಿಂದ ಬಳೆಗಳ ಕಣಕಣಾಟವೂ, ಘಲ್ಲು ಘಲ್ಲನೆ ಗೆಜ್ಜೆಗಳ ನಿನಾದವೂ ಕೇಳಬಂದುವು. ಆಮೇಲೆ ಆ ಮನೆಯೊಳಗಿನಿಂದ ಐದಾರು ಮಂದಿ ದೃಢಕಾಯರು ಬಂದು ಬೊಂಬೆಯಾಟದವರನ್ನು ಮುತ್ತಿದರು.

ಅವರಲ್ಲೊಬ್ಬನು, "ನಿಮ್ಮ ಆಂಜನೇಯನು ಮೋಹಿನೀ ಪಿಶಾಚಿಗಳನ್ನು ಓಡಿಸುತ್ತಾನೇನು? ನಿಮ್ಮ ಕೆಲಸ ನಾವು ಮುಗಿಸುತ್ತೇವೆ!" ಎಂದು ಗದರಿಸಿದನು. ಆ ಕೂಡಲೇ ಹತ್ತು ಮಂದಿ ಬೊಂಬೆಯಾಟದ ಹೆಂಗುಸರೂ ಗಂಡುಸರೂ ಒಮ್ಮೆಗೇ ಆ ದೃಢಕಾಯರ ಕೈಯಲ್ಲಿದ್ದ ದೊಣ್ಣೆಗಳನ್ನು

ಎಳೆದುಕೊಂಡು ಅವರನ್ನು ಸದೆಬಡೆಯ ತೊಡಗಿದರು. ಬೊಂಬೆಯಾಟದವರು ಅಷ್ಟೊಂದು ಬಲಿಷ್ಠರಾಗಿರುವುದನ್ನು ನೋಡಿ ದೃಢಕಾಯರು ಆಶ್ಚರ್ಯದಿಂದ ಮತಿ ಗೆಟ್ಟರು. ಓಡಿಹೋಗಲಿಕ್ಕೂ ಬಿಡದೆ ಬೊಂಬೆಯಾಟದವರು ಅವರನ್ನು ಹಿಡಿದು ಮರಗಳಿಗೆ ಕಟ್ಟಿ ಹಾಕಿಬಿಟ್ಟರು. ಆಮೇಲೆ ಬೊಂಬೆಯಾಟದ ಕೆಲವರು ದೀವಟಿ ಹಿಡಿದುಕೊಂಡು ಆ ಪಾಳು ಮನೆಯೊಳಗೆ ಪ್ರವೇಶಿಸಿದರು. ಒಳಗಿನ ಒಂದು ಕೋಣೆಯಲ್ಲಿ ಬಳೆಗಳನ್ನು ಹಾಕಲ್ಪಟ್ಟ ಒಂದು ಜತೆ ಮರದ ಕೈಗಳೂ, ಎರಡು ಗೆಜ್ಜೆಯ ಜತೆಗಳೂ ಇರುವುದನ್ನು ನೋಡಿದರು.

ಬೊಂಬೆಯಾಟದವರು ಮರಕ್ಕೆ ಕಟ್ಟಿದ ಧಾಂಡಿಗರಿಗೆ ಕೊರಡೆಗಳಿಂದ ಹೊಡೆದು ಹಣ್ಣು ಮಾಡುವಾಗ ಅವರು ಕಕ್ಕಿದ ನಿಜ ಸಂಗತಿ ಹೀಗಿತ್ತು:

ಗ್ರಾಮದ ಹಿರಿಯನಾದ ಮಲ್ಲ ನಾಯಕನೂ, ವೆಂಕಣ ದೊರೆಯೂ, ತಿಮ್ಮಣ್ಣ ಪಂತರೂ ಆ ಪಾಳುಬಿದ್ದ ಮನೆಯೊಳಗೆ ಅನೇಕ ಅಕ್ರಮ ಕಾರ್ಯಗಳನ್ನು ಮಾಡುತ್ತಾರೆ. ಅನೇಕ ದುಸ್ತಂತ್ರಗಳನ್ನು ಹೂಡುತ್ತಾರೆ. ಅವರ ಅಧಿಕಾರಕ್ಕೆ ಅಡ್ಡಬರುವವರನ್ನು ಶಿಕ್ಷಿಸಲಿಕ್ಕೂ, ಕಳ್ಳ ಸೊತ್ತುಗಳನ್ನು ಅಗ್ಗದಲ್ಲಿ ಕೊಂಡುಕೊಳ್ಳುವುದಕ್ಕೂ ಇತರ ಕೆಟ್ಟ ಕಾರ್ಯಗಳಿಗೂ ಆ ದೊಡ್ಡ ಮನುಷ್ಯರಿಗೆ ಈ ಮನೆಯೇ ಕಾರಸ್ಥಾನ. ತಮ್ಮ ರಹಸ್ಯವನ್ನು ಕಾಪಾಡಿಕೊಳ್ಳಲಿಕ್ಕೇ ಮೋಹಿನೀ ಪಿಶಾಚಿಗಳ ಸೃಷ್ಟಿಯಾಯಿತು. ಬೊಂಬೆಯಾಟದವರಿಂದ ಬಂಧಿಸಲ್ಪಟ್ಟವರು ಆ ಹಿರಿಯರ ಸೇವಕರು. ಅವರು ಇವರನ್ನು ಸಂಬಳಕೊಟ್ಟು ಇಟ್ಟುಕೊಂಡು ದಾರೀ ಹೋಕರಿಗೆ ಕೇಳುವಂತೆ ಗೆಜ್ಜೆಗಳ ಬಳೆಗಳ ಸಪ್ಪಳಗಳನ್ನು ಮಾಡುತ್ತಾ ಇರುತ್ತಾರೆ.

ಮೋಹಿನೀ ಪಿಶಾಚಿಗಳ ಹಾಗೆಯೇ ಬೊಂಬೆಯಾಟದವರೂ ಸುಳ್ಳಿನವರೇ! ಅವರೆಲ್ಲಾ ರಕ್ಷಕ ಭಟರು. ಪರಶಿವನನ್ನು ಅವರೇ ಕಳುಹಿಸಿದ್ದರು. ಅವನು ಹೇಳಿದ ವಿವರಗಳಿಂದ, ಮೋಸವನ್ನು ಹೊರಗೆಡವಲು ಬೊಂಬೆಯಾಟದವರ ವೇಷದಲ್ಲಿ ಬಂದಿದ್ದರು. ಅವರ ಗುಂಪಿನ ಹೆಂಗುಸರೂ ವೇಷಧಾರಿ ಗಂಡುಗಲಿಗಳೇ.

ಆ ದಿನ ರಾತ್ರಿ ಆ ಮೂವರು ದೊಡ್ಡ ಮನುಷ್ಯರ ಮನೆಗಳ ಶೋಧ ನಡೆಯಿತು. ಎಷ್ಟೋ ಕಳ್ಳ ಸೊತ್ತುಗಳೂ, ಕೆಟ್ಟ ರಿಕಾರ್ಡುಗಳೂ ಹೊರಬಿದ್ದುವು. ಎಲ್ಲರನ್ನೂ ಕೈದು ಮಾಡಿ ಸಾಗಿಸಿಕೊಂಡು ಹೋದರು. ಇಷ್ಟು ಕಾಲ ಮೋಹಿನೀ ಪಿಶಾಚಿಗಳೆಂದುಕೊಂಡವರು ತಮ್ಮ ಗ್ರಾಮದ ಹಿರಿಯರೇ ಎಂದು ತಿಳಿದು ಗ್ರಾಮಸ್ಥರು ಬೆರಗಾದರು.



# ಒಂದೇ ಕೆಲಸ, ರೀತಿ ಬೇರೆ ಬೇರೆ

ದೇವಗಿರಿಯಲ್ಲಿ ಮೂವರು ಸಹೋದರರಿದ್ದರು. ಅವರು ಯಾವ ಕೆಲಸ ಮಾಡಿದರೂ ಮೂವರೂ ಮೂರು ವಿಧವಾಗಿ, ಒಬ್ಬರು ಮಾಡಿದಂತೆ ಇನ್ನೊಬ್ಬರು ಮಾಡುವುದಿಲ್ಲ.

ಈ ಸಮಾಚಾರವನ್ನು ಕೇಳಿ ಕಾಂಚೀಪುರದ ರಾಜನು ಅವರನ್ನು ಸೋಲಿಸಬೇಕೆಂದು, ಒಂದುದಿನ ಒಂದು ವೇಳೆಯನ್ನು ನಿರ್ಣಯಿಸಿ, ಆ ವೇಳೆಗೆ ತಪ್ಪದೆ ಬರಬೇಕೆಂದು ಆಜ್ಞೆ ಕಳುಹಿಸಿದನು. ಮೂವರೂ ಒಂದೇ ವೇಳೆಯಲ್ಲಿ ಒಂದೇಸಾರಿ ಬಂದರೆ, ಅವರು ಕೆಲಸವನ್ನು ಒಂದೇ ವಿಧವಾಗಿ ಮಾಡಿದರೆಂಬುದು ನಿರೂಪಣವಾಗಿ ಸೋತು ಹೋಗುವರೆಂಬುದು ರಾಜನ ಉದ್ದೇಶ.

ಮೂವರೂ ಗಂಟೆ ಹೊಡೆದ ಹಾಗೆ ಒಂದೇ ಕ್ಷಣದಲ್ಲಿ ಸಭೆಯೊಳಗೆ ಕಾಲಿಟ್ಟರು. ಆದರೆ ಮೂವರೂ ಮೂರು ದ್ವಾರಗಳಿಂದ ಬಂದುದನ್ನು ನೋಡಿ ರಾಜನಿಗೆ ಆಶ್ಚರ್ಯವಾಯಿತು.

ತರುವಾಯ ರಾಜಭಟರು ಮೂವರಿಗೂ ಮೂರು ಲೋಟೆಗಳಲ್ಲಿ ಪಾನೀಯವನ್ನು ತಂದು ಮೂವರು ಸೋದರರಿಗೂ ಕೊಟ್ಟರು.

ಒಬ್ಬನು ಕೂಡಲೇ ಅದನ್ನು ಕುಡಿದುಬಿಟ್ಟ. ಇನ್ನೊಬ್ಬನು ಸಾಧಾರಣವಾಗಿ ಕುಡಿದ. ಮೂರನೆಯವನು ಸ್ವಲ್ಪಸ್ವಲ್ಪವೇ ಚಪ್ಪರಿಸಿಕೊಂಡು ಕುಡಿದನು.

ಕುಡಿದ ಲೋಟೆಗಳನ್ನು ಒಬ್ಬನು ನೆಟ್ಟಗಿಟ್ಟನು. ಇನ್ನೊಬ್ಬನು ಅಡ್ಡವಾಗಿಯೂ, ಮೂರನೆಯವನು ಪೂರ್ತಿ ಬೋರ್ಲಿಸಿಯೂ ಇಟ್ಟರು. ಭಟರು ಇನ್ನಿಷ್ಟು ಪಾನೀಯವನ್ನು ತಂದರು. ನೆಟ್ಟಗೆ ಲೋಟಾ ಇಟ್ಟವನು "ಬೇಡ" ಎಂದು ಹೇಳಿದನು. ಪೂರ್ತಿ ಬೋರ್ಲ ಇಟ್ಟವನು ಬೇಡವೆಂಬಂತೆ ತಲೆಯಾಡಿಸಿದನು. ಅಡ್ಡವಾಗಿಟ್ಟವನು ಅದನ್ನು ಇನ್ನೊಂದು ಬದಿಗೆ ಅಡ್ಡವಿಟ್ಟು ಬೇಡವೆಂದು ಸೂಚಿಸಿದನು.

ರಾಜನು ಅವರ ಬುದ್ಧಿವಂತಿಕೆಗೆ ಮೆಚ್ಚಿ, ಅವರನ್ನು ಸೋಲಿಸುವುದು ಸುಲಭವಲ್ಲವೆಂದು ತಿಳಿದು. ಅವರನ್ನು ಸನ್ಮಾನಿಸಿ ಕಳುಹಿಸಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೮೦ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Brahmdev





Brahmdev

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಆಗಸ್ಟ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಜೂನ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಈ ವಾಮನ ಮೂರ್ತಿಯ

ಎರಡನೇ ಫೋಟೋ: ನಂಬದಿರೋ ರಾಕ್ಷಸೇಂದ್ರಾ!

ಕಳುಹಿಸಿದವರು: ಎಸ್. ಮಂಜುಳಾ

ಎನ್. ಎ. ೪೫೬, ಬೆಂಗಳೂರು—೧೩

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.













IOB /3A/80- Kan






ವೀಣಾ ತಂದೆಯು ಒಂದು ಒಳ್ಳೆಯ ಕಾರ್ಯವನ್ನು ಮಾಡಿದ್ದ ಅವನು ಐಓಬಿಯಲ್ಲಿ ಅವಳ ಹೆಸರಿನಲ್ಲಿ ಒಂದು 'ಮೈನರ್ ಖಾತೆ'ಯನ್ನು ತೆರೆದಿದ್ದ ಮತ್ತು ಅದರಲ್ಲಿ ಅವಳಿಗಾಗಿ ಮಿಕ್ಕ ಅಲ್ಪಸ್ವಲ್ಪ ಹಣವನ್ನು ಹಾಕುತ್ತಿದ್ದ. ಈಗ ವೀಣಾಗೆ ಹನ್ನೆರಡು ವರ್ಷವಯಸ್ಸಾಗಿದೆ — ಅವಳೇ ತನ್ನ ಖಾತೆಯನ್ನು ನೋಡಿಕೊಳ್ಳ ಬಹುದು. ಮತ್ತು ಉಳಿತಾಯಕ್ಕೆ ಬದ್ಧಯೂಬರುತ್ತದೆ.

## ಐ.ಓ.ಬಿ ಯ 'ಮೈನರ್ ಖಾತೆ' ಯಲ್ಲಿನ

**ನಿಮ್ಮ ಹಣವು ಅನೇಕಕಾರ್ಯಗಳಿಗೆ ಬಹಳ ಉಪಯೋಗಕ್ಕೆ ಬರುತ್ತದೆ.**

ಐ.ಓ.ಬಿ ಗೆ ಬನ್ನಿರಿ
ನಿಮಗಾಗಿ ನಮ್ಮಲ್ಲಿ ದೊಡ್ಡ
ಯೋಜನೆಗಳಿವೆ.



**ಇಂಡಿಯನ್ ಓವರ್‌ಸೀಸ್ ಬ್ಯಾಂಕ್**
ನಿಮ್ಮ ಅಭಿವೃದ್ಧಿಗೆ ಉತ್ತಮ ಸ್ನೇಹಿತ

# ದಂಗೆಕೋರರ ವಿನಾಶ!


ದುಷ್ಟ ದಂತಭಕ್ಷಕ
(COOH*) ದಂತ
ಪಟ್ಟಣವನ್ನು ನಾಶ
ಮಾಡಲು ದಂಗೆಕೋರರ
ಸೇನೆಗೆ ತರಬೇತಿ
ನೀಡುತ್ತಿದ್ದಾನೆ.
CANDY
SUGAR


ಸೇನಾಧಿಪತಿಗೆ
ಈ ಸುದ್ದಿ
ಸಿಗುತ್ತದೆ.
ನಾವು ಕೂಡಲೇ ಬಿನಾಕಾ-ಎಫ್ ನನ್ನು
ಕರೆತರಿಸಬೇಕು. ನಮ್ಮಲ್ಲಿ
ಯುದ್ಧದ ಆಯುಧಗಳು ಬಹಳ
ಕಡಿಮೆ ಇವೆ ಎಂದು ದಂತಭಕ್ಷಕನಿಗೆ
ಗೊತ್ತಾಗಿದೆ.


ಬಿನಾಕಾ-ಎಫ್ ಪಂತವನ್ನು ಸ್ವೀಕರಿಸುತ್ತಾನೆ.
ನಾವು ಬಿನಾಕಾ ಫ್ಲೋರೈಡ್
ಟೂಥ್‌ಪೇಸ್ಟ್ ಮತ್ತು ಬಿನಾಕಾ
ಟೂಥ್‌ಬ್ರಶ್‌ನಿಂದ ದಂತಭಕ್ಷಕನ
ಮುಖಭಂಗ ಮಾಡುವೆವು.
BF


ದಂತಪಟ್ಟಣದ ಸೇನೆಯು ದಿನಾಲೂ
ಬೆಳಗ್ಗೆ ಮತ್ತು ರಾತ್ರಿ ಅಭ್ಯಾಸ
ಮಾಡಿ ಯುದ್ಧಕ್ಕೆ ಸಿದ್ಧವಿದೆ.


ಸೋಮವಾರ.
ಡಿಸೆಂಬರ್ XO, XMV7.
ರಾತ್ರಿಯ ಅಂಧಕಾರದಲ್ಲಿ
ದಂತಭಕ್ಷಕನು ಆಕ್ರಮಣ
ಮಾಡುತ್ತಾನೆ.




ಆದರೆ ಬಿನಾಕಾ-ಎಫ್
ಮತ್ತು ದಂತಪಟ್ಟಣದ ಸೈನಿಕರು ಅವನಿಗೆ
ಮುಖ ಮುರಿಯುವ ಜವಾಬು ಕೊಡುತ್ತಾರೆ.


ಓಡಿ! ನಾವು ಸೋತೆವು!


ಈ ರೀತಿ ಬಿನಾಕಾ-ಎಫ್
ಮತ್ತು ದಂತಪಟ್ಟಣದ
ಸೈನಿಕರು ಒಂದುಗೂಡಿ
ದಂತಭಕ್ಷಕನ ಸೈನ್ಯವನ್ನು
ನಾಶಗೊಳಿಸುತ್ತಾರೆ.
Binaca Fluo


ದಂತಪಟ್ಟಣದ ಸೈನ್ಯಕ್ಕೆ
ಮಹಾ ವಿಜಯ!


ಇದು ಉತ್ತಮ ಆಯುಧಗಳ ಎಂದರೆ
ಬಿನಾಕಾ ಫ್ಲೋರೈಡ್ ಟೂಥ್‌ಪೇಸ್ಟ್ ಮತ್ತು ಬಿನಾಕಾ
ಟೂಥ್‌ಬ್ರಶ್‌ಗಳ ಹಾಗೂ ತರಬೇತಿಯ
ಚಮತ್ಕಾರ!
BF


Binaca Fluoride
toothpaste
Binaca Fluoride

# ಚಿಕ್ಕ ಮಕ್ಕಳು ಪ್ರೀತಿ ಬಯಸಿವೆ, ಪ್ರೀತಿ ಪಡೆಯುತ್ತ ಮತ್ತೆ ಬೆಳೆದಿವೆ




ಪ್ರೀತಿಯ ಇನ್ನೊಂದು ಹೆಸರು

**ಪಾರ್ಲೆ ಗ್ಲುಕೋ**

**ಅಪೂರ್ವವಾದ ರುಚಿ**

**ತುಂಬಿ ತುಳುಕುವ ಶಕ್ತಿ**

ಹಾಲು, ಗೋಧಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ
ಹಿತಕಾರೀ ಸತ್ವಗಳಿಂದ ಸಮೃದ್ಧವಾಗಿವೆ.



ವರ್ಲ್ಡ್ ಸಿಲೆಕ್ಷನ್
ಅವಾರ್ಡ್‌ನ ವಿಜಯಿ

ಪಾರ್ಲೆ
ಗ್ಲುಕೋ
ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್

everest/79/PP/159-kn